A. B. Krishna Raj
15.2.58.

ವರುಷ ೫ ಕುಸುಮ ೨೫

# ಅಗ್ನಿಕುಂಡ





ಗಣಪತಿ ಮೊಳೆಯಾರ.
ಬೋರ್ಡ್ ಹೈಸ್ಕೂಲ್,
ಹಿರಿಯಡ್ಕ (ದ. ಕ)




ಪ್ರಕಾಶಕರು:
ವಿವೇಕ ಸಾಹಿತ್ಯಮಾಲೆ,
ಮಂಗಳೂರು — 3.

ಜನವರಿ 1958

*

ಬೆಲೆ: ಒಂದು ರೂಪಾಯಿ

*



ಸಂಪಾದಕರು:
ರಾಮ ಮೊಳೆಯಾರ, ವಿದ್ವಾನ್



*



*

ಮುದ್ರಕರು:
ವಿಜಯ ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್ ಲಿಮಿಟೆಡ್
ಪಳನೀರು ರಸ್ತೆ, ಮಂಗಳೂರು-1.

a B. Krishna Raju

# ಎರಡು ಮಾತು

"ಅಗ್ನಿಕುಂಡ" ಸಾಹಿತ್ಯಮಾಲೆಯ ೨೫ನೆಯ ಕುಸುಮವಾಗಿ ಕನ್ನಡ ಸಾಹಿತ್ಯಾಭಿಮಾನಿಗಳ ಕೈಸೇರುತ್ತಿದೆ.

ವಸ್ತು, ವರ್ಣನೆ, ಭಾಷೆಗಳ ದೃಷ್ಟಿಯಿಂದ ಉತ್ತಮವಿದ್ದು ಓದುಗರಲ್ಲಿ ಸತ್ಪರಿಣಾಮವನ್ನುಂಟುಮಾಡುವುದಕ್ಕೆ ಸಮರ್ಥವಾದ ಕತೆಗಳನ್ನೊಳಗೊಂಡ ಈ ಕಥಾಸಂಕಲನವನ್ನು ಸಾಹಿತ್ಯಮಾಲೆಯಲ್ಲಿ ಪ್ರಕಟಿಸಲು ಒದಗಿಸಿಕೊಟ್ಟ ತಮ್ಮ ಚಿ॥ ಗಣಪತಿ ಮೊಳೆಯಾರನ ವಿಶ್ವಾಸಕ್ಕೆ ಋಣಿಯಾಗಿರುವೆ. ಈ ಸಂಕಲನದಲ್ಲಿರುವ ಕತೆಗಳನ್ನು ಈ ಮೊದಲು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ ಕರ್ಮವೀರ, ಪ್ರಜಾವಾಣಿ, ಪ್ರಜಾಮತ ಪತ್ರಿಕೆಗಳ ಸಂಪಾದಕರನ್ನು ಸ್ಮರಿಸಿಕೊಳ್ಳುವೆವು.

ಸಾಹಿತ್ಯಮಾಲೆಯ ಹಿತಾಕಾಂಕ್ಷಿಗಳಾದ ಚಂದಾದಾರರಿಗೆ ಒಲವಿನ ವಂದನೆಗಳು. ಸಕಾಲದಲ್ಲಿ ಮುದ್ರಣ ಕಾರ್ಯವನ್ನೆಸಗಿಕೊಟ್ಟ ವಿಜಯ ಮುದ್ರಣಾಲಯದ ಗೆ॥ ರಾಮಚಂದ್ರರಾಯರ ಸಹಕಾರಕ್ಕೆ ಋಣಿಗಳಾಗಿರುವೆವು.

ಸಂಪಾದಕ.

---

ಮುಂದಿನ ಕುಸುಮ

"ಅಪ್ಪಾಜಿ"

(ಐತಿಹಾಸಿಕ ಕಾದಂಬರಿ)

ರಾ. ಮೊ ವಿಶ್ವಾಮಿತ್ರ

---

# ಪರಿವಿಡಿ

1. ಅಗ್ನಿಕುಂಡ
2. ಗೌರೀಶಂಕರ
3. ಬಲೆ ಬಿಗಿಯಿತು
4. ರತ್ನಪ್ರಭಾ
5. ಸಿಡಿಲುಮರಿ
6. ಕ್ರೋಧ ಆರಿತು ಪ್ರೇಮ ಉರಿಯಿತು

("ಅಗ್ನಿಕುಂಡ" ದಿ. ಪ್ರೇಮಚಂದರ ಕತೆಯ ಆಧಾರದಿಂದ ರಚಿತವಾದುದು. ಉಳಿದವು ಲೇಖಕರ ಸ್ವತಂತ್ರ ಕತೆಗಳು.)

# ಅಗ್ನಿ ಕುಂಡ

೧

ಮಹಾರಾಜ ಜಸವಂತಸಿಂಹನ ಮಗನಾದ ಕುಮಾರ ಪೃಥ್ವೀಸಿಂಹನು ರೂಪ-ಗುಣ ಮತ್ತು ವಿದ್ಯೆಗಳಲ್ಲಿ ಪ್ರಸಿದ್ಧನಾಗಿದ್ದನು. ಇರಾನ್, ಮಿಸ್ರ, ಶ್ಯಾಮ ಮೊದಲಾದ ದೇಶಗಳಲ್ಲಿ ತಿರುಗಾಡಿ ಹಲವು ಭಾಷೆಗಳಲ್ಲಿ ಪಾಂಡಿತ್ಯ ವನ್ನು ಪಡೆದಿದ್ದನು. ಅವನಿಗೆ ಒಬ್ಬಳು ಸಹೋದರಿಯಿದ್ದಳು. ಅವಳ ಹೆಸರು ರಾಜನಂದಿನಿ. ಅವಳು ಸುರೂಪಿಯೂ ಸರ್ವಗುಣಸಂಪನ್ನೆಯೂ ಆಗಿದ್ದಂತೆಯೇ ಪ್ರಸನ್ನ ವದನೆಯೂ ಮೃದುಭಾಷಿಣಿಯೂ ಆಗಿದ್ದಳು. ಕಟು ಮಾತುಗಳನ್ನು ಆಡಿ ಯಾರ ಮನಸ್ಸನ್ನಾದರೂ ನೋಯುವಂತೆ ಮಾಡು ವುದು ಅವಳಿಗೆ ಹಿತವಿರಲಿಲ್ಲ. ಪಾಪವನ್ನು ತನ್ನ ಬಳಿಗೆ ಸುಳಿಯಲೂ ಅವಳು ಅನುಗೊಡುತ್ತಿರಲಿಲ್ಲ. ಈ ವಿಚಾರವಾಗಿ ಮಹಾರಾಜ ಜಸವಂತ ಸಿಂಹನೊಡನೆಯೂ ವಾದ-ವಿವಾದ ಮಾಡುತ್ತಿದ್ದಳು ಮತ್ತು ಅವನಲ್ಲಿ ಯಾದರೂ ಅನುಚಿತ ಕಾರ್ಯಾಚರಣೆಗೈಯುವುದನ್ನು ನೋಡಿದರೆ ತನ್ನಿಂದಾ ದಂತೆ ಅದನ್ನು ತಡೆಯಲು ಪ್ರಯತ್ನಿಸುತ್ತಿದ್ದಳು. ಕುಮಾರ ಧರ್ಮಸಿಂಹ ನೊಡನೆ ಅವಳ ಮದುವೆಯಾಗಿತ್ತು. ಅವನು ಒಂದು ಸಣ್ಣ ಕಿಲ್ಲೇದಾರನೂ ಜಸವಂತಸಿಂಹನ ಸೈನ್ಯದಲ್ಲಿ ಒಬ್ಬ ಉಚ್ಚ ಪದಾಧಿಕಾರಿಯೂ ಆಗಿದ್ದನು. ಉದಾರಿಯೂ ಕರ್ಮವೀರನೂ ಆದ ಅವನ ಭಾಗ್ಯವನ್ನು ನೋಡಿ ಮಹಾ ರಾಜನು ರಾಜನಂದಿನಿಯನ್ನು ಅವನಿಗೆ ಕೊಟ್ಟಿದ್ದನು. ಇಬ್ಬರ ವೈವಾಹಿಕ ಜೀವನವೂ ಸುಖಮಯವಾಗಿತ್ತು. ಧರ್ಮಸಿಂಹನು ಹೆಚ್ಚಾಗಿ ಜೋಧ ಪುರದಲ್ಲಿಯೇ ಇರುತ್ತಿದ್ದನು. ಪೃಥ್ವೀಸಿಂಹನು ಅವನ ಗಾಢಮಿತ್ರನಾಗಿ ದ್ದನು. ಸಹೋದರರಲ್ಲೆಲ್ಲೂ ಇಲ್ಲದಷ್ಟು ಪ್ರೇಮ ಅವರಿಬ್ಬರಲ್ಲಿತ್ತು. ಅವರಿಬ್ಬ ರಂತೆಯೇ ಅವರ ರಾಣಿಯರಾದ ರಾಜನಂದಿನಿ ಮತ್ತು ದುರ್ಗಾಕುಮಾರಿ ಯರೂ ಪ್ರಾಣದಗೆಳತಿಯರಾಗಿದ್ದರು. ದುರ್ಗಾಕುಮಾರಿಯು ತುಂಬಾ ಸುಶೀಲೆಯೂ ಚತುರೆಯೂ ಆಗಿದ್ದಳು. ಇಬ್ಬರು ರಾಜಕುಮಾರಿಯರಿಗೂ ಸಂಸ್ಕೃತದಲ್ಲಿ ತುಂಬಾ ಪ್ರೀತಿಯಿತ್ತು.

ಒಂದುದಿನ ಇಬ್ಬರು ರಾಜಕುಮಾರಿಯರೂ ಉದ್ಯಾನದಲ್ಲಿ ಕುಳಿ ತಿದ್ದಾಗ ಒಬ್ಬಳು ದಾಸಿ ರಾಜನಂದಿನಿಯ ಕೈಯಲ್ಲಿ ಒಂದು ಪತ್ರವನ್ನು

ತಂದಿತ್ತಳು. ರಾಜನಂದಿನಿ ಅದನ್ನು ತೆರೆದಳು. ಅದು ಸಂಸ್ಕೃತದಲ್ಲಿತ್ತು. ಅದನ್ನು ಓದಿಕೊಂಡು ಅವಳು ದಾಸಿಯೊಡನೆ ಹೇಳಿದಳು—"ಅವರನ್ನು ಕಳುಹಿಸಿಕೊಡು." ಸ್ವಲ್ಪ ಹೊತ್ತಿನಲ್ಲಿ ತಲೆಯಿಂದ ಕಾಲಿನ ತನಕ ಬಟ್ಟೆಯ ಮುಸುಕಿಟ್ಟುಕೊಂಡ ಒಬ್ಬಳು ಸ್ತ್ರೀ ಬರುವುದು ಕಾಣಿಸಿತು. ಅವಳ ಪ್ರಾಯ ಇಪ್ಪತ್ತೈದು ವರ್ಷಗಳಿಗಿಂತ ಹೆಚ್ಚಿರಲಿಲ್ಲ. ಮೈಬಣ್ಣ ಹಳದಿಯಾಗಿತ್ತು. ಕಣ್ಣುಗಳು ದೊಡ್ಡದಾಗಿದ್ದುವು. ತುಟಿಗಳು ಒಣಗಿದ್ದುವು. ಅವಳ ಚಲನವಲನಗಳಲ್ಲಿ ಕೋಮಲತೆಯಿತ್ತು. ಅಂಗಾಂಗಗಳು ಮನೋಹರವಾಗಿದ್ದುವು. ಕಾಲಗತಿಯು ಅವಳಿಗೆ ಆ ಗತಿಯನ್ನು ತಂದಿರಬೇಕಲ್ಲದೆ, ಒಂದು ಕಾಲದಲ್ಲಿ ಆಕೆ ಬಹಳ ಸುಂದರಿಯಾಗಿದ್ದಳೆಂದು ಸಂದೇಹ ಮೂಡುವುದು. ಅವಳು ಬಂದೊಡನೆಯೇ ತಲೆಬಾಗಿಸಿದಳು. ಅನಂತರ ಆಶೀರ್ವಾದವಿತ್ತು ಕುಳಿತುಕೊಂಡಳು. ರಾಜನಂದಿನಿ ಅವಳನ್ನು ತಲೆಯಿಂದ ಕಾಲಿನತನಕ ಲಕ್ಷ್ಯಪೂರ್ವಕವಾಗಿ ನೋಡಿ ಕೇಳಿದಳು:

"ನಿನ್ನ ಹೆಸರೇನು?"

"ನನ್ನನ್ನು 'ವ್ರಜವಿಲಾಸಿನಿ' ಎಂದು ಕರೆಯುವರು." ಅವಳು ಉತ್ತರವಿತ್ತಳು.

"ಎಲ್ಲಿ ವಾಸಿಸುವಿ?"

"ಇಲ್ಲಿಂದ ಮೂರು ದಿನಗಳ ದಾರಿಯಲ್ಲಿ ವಿಕ್ರಮನಗರವೆಂಬ ಹಳಿಯಿದೆ. ಅಲ್ಲಿ ನನ್ನ ಮನೆಯಿದೆ."

"ಸಂಸ್ಕೃತವನ್ನು ಎಲ್ಲಿ ಕಲಿತೆ?"

"ನನ್ನ ತಂದೆಯವರು ಸಂಸ್ಕೃತದಲ್ಲಿ ಬಹಳ ದೊಡ್ಡ ಪಂಡಿತರಾಗಿದ್ದರು. ಅವರೇ ಅಷ್ಟಿಷ್ಟು ಕಲಿಸಿದರು."

"ನಿನಗೆ ಮದುವೆಯಾಗಿದೆಯಷ್ಟೆ?"

ಮದುವೆಯ ಹೆಸರೆತ್ತಿದೊಡನೆಯೇ ವ್ರಜವಿಲಾಸಿನಿಯ ಕಣ್ಣುಗಳಲ್ಲಿ ಕಣ್ಣೀರು ಹರಿಯತೊಡಗಿತು. ಅವಳು ತನ್ನಷ್ಟಕ್ಕೇ ಸೈರಿಸಿಕೊಂಡು ಹೇಳಿದಳು.

"ಇದಕ್ಕೆ ಇನ್ನಾವಾಗಲಾದರೂ ಉತ್ತರಕೊಡುವೆನು. ನನ್ನ ರಾಮಾಯಣ ಬಹಳ ದುಃಖದಾಯಕವಾಗಿದೆ. ಅದನ್ನು ಕೇಳಿದಾಗ ತಮಗೂ ದುಃಖವಾಗಬಹುದು. ಆದುದರಿಂದ ಈ ಬಾರಿ ಕ್ಷಮಿಸಿರಿ."

ಅಂದಿನಿಂದ ವ್ರಜವಿಲಾಸಿನಿ ಅಲ್ಲಿಯೇ ಇರತೊಡಗಿದಳು. ಸಂಸ್ಕೃತ ಸಾಹಿತ್ಯದಲ್ಲಿ ಅವಳಿಗೆ ಹೆಚ್ಚು ಪರಿಶ್ರಮವಿತ್ತು. ರಾಜಕುಮಾರಿಯರಿಗೆ ಪ್ರತಿದಿನ ಅವಳು ಭಾವಪೂರ್ಣ ಕಾವ್ಯಗಳನ್ನು ಓದಿಹೇಳುವಳು. ಅವಳ ವಿದ್ಯೆ ರೂಪಗಳು ರಾಜಕುಮಾರಿಯರಲ್ಲಿ ದಿನದಿನ ಅವಳ ಕುರಿತಾಗಿ ಪ್ರೀತಿಗೌರವಗಳನ್ನು ಬೆಳೆಸಿದುವು. ಅವರೊಳಗೆ ಆಟ-ವಿನೋದಗಳೂ ನಡೆಯುತ್ತಿದ್ದುವು. ಅವರು ಗೆಳತಿಯರಂತೆ ಇರತೊಡಗಿದರು.

೨

ಕೆಲವು ಮಾಸಗಳು ಕಳೆದುವು. ಕುಮಾರ ಪೃಥ್ವೀಸಿಂಹ ಮತ್ತು ಧರ್ಮಸಿಂಹರು ಮಹಾರಾಜನೊಡನೆ ಅಫಘಾನಿಸ್ತಾನದ ವಿಜಯಕ್ಕಾಗಿ ನಡೆದಿದ್ದರು. ಈ ವಿರಹದ ದಿನಗಳು ಮೇಘದೂತ ಮತ್ತು ರಘುವಂಶ ಗಳನ್ನು ಓದುವುದರಲ್ಲಿ ಕಳೆದುವು. ವ್ರಜವಿಲಾಸಿನಿಗೆ ಕಾಳಿದಾಸನ ಕಾವ್ಯ ಗಳಲ್ಲಿ ಬಹಳ ಪ್ರೀತಿಯಿತ್ತು. ರಾಜಕುಮಾರಿಯರಿಬ್ಬರೂ ಮುಗ್ಧರಾಗು ವಂತೆ ಅವಳು ಕಾವ್ಯದ ವ್ಯಾಖ್ಯಾನಮಾಡುತ್ತಿದ್ದಳು.

ಒಂದುದಿನ ಸಂಜೆಯಹೊತ್ತು ರಾಜಕುಮಾರಿಯರಿಬ್ಬರೂ ಉದ್ಯಾನ ದಲ್ಲಿ ವಿಹಾರಕ್ಕೆ ಹೊರಟಿದ್ದರು. ಅಲ್ಲಿ ಹಸಿರು ಹುಲ್ಲಿನಲ್ಲಿ ವ್ರಜವಿಲಾಸಿನಿ ಒರಗಿಕೊಂಡಿದ್ದುದು ಅವರಿಗೆ ಕಂಡುಬಂದಿತು. ಅವಳ ಕಣ್ಣುಗಳಲ್ಲಿ ಕಂಬನಿ ಸುರಿಯುತ್ತಿತ್ತು. ರಾಜಕುಮಾರಿಯರ ಸ್ನೇಹ ಮತ್ತು ಉತ್ತಮ ವರ್ತನೆಯಿಂದ ಅವಳ ಒಣಗಿಹೋದ ಸೌಂದರ್ಯವು ಈ ದಿನಗಳಲ್ಲಿ ಸ್ವಲ್ಪ ಮಟ್ಟಿಗೆ ಅರಳಿತ್ತು. ಅವರೊಡನೆ ಅವಳೂ ಕೂಡ ಈಗ ರಾಜಕುಮಾರಿ ಯರಂತೆಯೇ ತೋರುತ್ತಿದ್ದಳು. ಆದರೂ ಆ ನಿರ್ಭಾಗ್ಯೆ ಹೆಚ್ಚಾಗಿ ಏಕಾಂತದಲ್ಲೇ ಇದ್ದುಕೊಂಡು ಅಳುತ್ತಿದ್ದಳು. ಅವಳ ಹೃದಯದಲ್ಲಿ ನಾಟಿದ್ದ ಮುಳ್ಳು ಉಸಿರಾಡಿಸುವಷ್ಟು ವೇಳೆಯೂ ಅವಳು ಆನಂದದಲ್ಲಿರ ಗೊಡುತ್ತಿರಲಿಲ್ಲ. ಈ ಬಾರಿ ರಾಜಕುಮಾರಿಯರು ಅವಳು ಅಳುತ್ತಿದ್ದು ದನ್ನು ನೋಡಿ ಬಹಳ ಸಹಾನುಭೂತಿಯಿಂದ ಅವಳ ಬಳಿಯಲ್ಲಿ ಕುಳಿ ತರು. ರಾಜನಂದಿನಿಯು ಅವಳ ತಲೆಯನ್ನು ತನ್ನ ತೊಡೆಯಮೇಲಿರಿಸಿ ಕೊಂಡು, ಗುಲಾಬಿಯಂತಹ ಅವಳ ಗಲ್ಲಗಳನ್ನು ಅಂಗೈಗಳಿಂದ ತಟ್ಟುತ್ತಾ ನುಡಿದಳು:

"ಗೆಳತಿ, ನೀನು ನಿನ್ನ ಹೃದಯದ ವೇದನೆಯನ್ನು ನನ್ನೊಡನೆ ಹೇಳಬಾರದೇ? ಈಗಲೂ ನಾವು ದೂರದವರೇ? ನೀನು ಈ ರೀತಿ ಒಬ್ಬಳೇ ದುಃಖದ ಅಗ್ನಿಯಲ್ಲಿ ಬೇಯುವುದನ್ನು ನಮ್ಮಿಂದ ನೋಡಲಾಗುವುದಿಲ್ಲ."

ವ್ರಜವಿಲಾಸಿನಿಯು ಮಾತನ್ನು ಹತೋಟಿಗೆ ತಂದುಕೊಂಡು ನುಡಿದಳು:

"ಸಹೋದರಿ, ನಾನು ಅಭಾಗಿನಿ. ನನ್ನ ಕತೆ ಕೇಳದಿರು."

"ನಿನಗೆ ಕೆಡುಕೆನಿಸದಿದ್ದರೆ ಒಂದು ಮಾತನ್ನು ಕೇಳುವೆ."

"ಏನು—ಹೇಳು."

"ಅಂದು ನಾನು ಕೇಳಿದ್ದೆನಲ್ಲ—ಇದೇ: ನಿನಗೆ ಮದುವೆ ಆಗಿದೆಯೋ ಇಲ್ಲವೋ?"

"ಇದಕ್ಕೆ ನಾನು ಏನು ಉತ್ತರವೀಯಲಿ?—ಇನ್ನೂ ಆಗಿಲ್ಲ."

"ಯಾರ ಪ್ರೇಮದ ಬಾಣವೇನಾದರೂ ಎದೆಯಲ್ಲಿ ನಾಟಿದೆಯೇ?"

"ಇಲ್ಲ ಸೋದರಿ......ದೇವರಿಗೆ ಗೊತ್ತು."

"ಹಾಗಾದರೆ ಇಷ್ಟು ಉದಾಸೀನಳಾಗಿ ಏಕಿರುವಿ. ಪ್ರೇಮದ ಆನಂದವನ್ನು ಸವಿಯಲು ಮನಸ್ಸು ಬಯಸುತ್ತದೇನು?"

"ಇಲ್ಲ, ದುಃಖದ ಹೊರತು ಮನಸ್ಸಿನಲ್ಲಿ ಪ್ರೇಮಕ್ಕೆ ಸ್ಥಾನವೇ ಇಲ್ಲ."

"ಆದರೆ, ನಾವು ಅಲ್ಲಿ ಪ್ರೇಮಕ್ಕೆ ಸ್ಥಾನ ಕಲ್ಪಿಸುವೆವು."

ವ್ರಜವಿಲಾಸಿನಿ ಮಾತಿನ ಅರ್ಥವನ್ನು ಗ್ರಹಿಸಿಕೊಂಡು ನುಡಿದಳು:

"ಸಹೋದರಿ, ಈ ಮಾತುಗಳಲ್ಲಿ ಚರ್ಚಿಸುವುದನ್ನು ಬಿಟ್ಟು ಬಿಡು."

"ನಾನು ನಿನಗೆ ವಿವಾಹ ಏರ್ಪಡಿಸುವೆ. ದಿವಾನ ಜಯಚಂದರನ್ನು ನೋಡಿರುವಿಯೇನು?"

ವ್ರಜವಿಲಾಸಿನಿ ಕಣ್ಣೀರು ತುಂಬಿಕೊಂಡು ಹೇಳಿದಳು:

"ರಾಜಕುಮಾರಿ, ನಾನು ವ್ರತಧಾರಿಣಿ. ಆ ವ್ರತವನ್ನು ಪೂರೈಸುವುದೇ ನನ್ನ ಜೀವನದ ಗುರಿ. ವ್ರತವನ್ನು ಪೂರೈಸುವುದಕ್ಕಾಗಿಯೇ ನಾನು ಜೀವಿಸಿರುವೆ. ಇಲ್ಲವಾದರೆ, ಎಂದೋ ಸತ್ತು ಬಿಡುತ್ತಿದ್ದೆ—ಅಂತಹ ವಿಪತ್ತುಗಳು ನನಗೆ ಕವಿದಿದ್ದುವು. ನನ್ನ ತಂದೆ ವಿಕ್ರಮನಗರದ ಜಮೀನ್ದಾರರಾಗಿದ್ದರು. ನನ್ನ ಹೊರತು ಅವರಿಗೆ ಬೇರೆ ಮಕ್ಕಳಿಲ್ಲ. ಅವರು

ನನ್ನನ್ನು ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದರು. ನನಗಾಗಿಯೇ ಅವರು ಎಷ್ಟೋ ಸಂಸ್ಕೃತ ಸಾಹಿತ್ಯವನ್ನು ಓದಿದರು. ಯುದ್ಧವಿದ್ಯೆಯಲ್ಲೂ ಅವರು ನಿಪುಣರಾಗಿದ್ದರು. ಎಷ್ಟೋ ಬಾರಿ ಯುದ್ಧಗಳಿಗೂ ಹೋಗಿದ್ದರು

"ಒಂದು ದಿನ ಗೋಧೂಲಿ ಸಮಯದಲ್ಲಿ ಎಲ್ಲಾ ದನಕರುಗಳೂ ಕಾಡಿನಿಂದ ಹಿಂದಿರುಗುತ್ತಿದ್ದುವು. ನಾನು ನನ್ನ ಮನೆಯ ಬಾಗಿಲಲ್ಲಿ ನಿಂತಿದ್ದೆನು. ಅಷ್ಟರಲ್ಲಿ ತಲೆಗೆ ಮುಂಡಾಸು ಕಟ್ಟಿದ ಆಯುಧಗಳುಳ್ಳ ಒಬ್ಬ ತರುಣನು ತಿರುಗಾಡುತ್ತಾ ಬರುವುದು ತೋರಿತು. ನನ್ನ ಪ್ರೀತಿಯ ದನವು ಇಷ್ಟರಲ್ಲಿ ಕಾಡಿನಿಂದ ಹಿಂದಿರುಗಿತ್ತು. ಅದರ ಕರುವು ಅಲ್ಲಲ್ಲಿ ಆನಂದದಿಂದ ನಲಿದಾಡುತ್ತಿತ್ತು. ಸಂದರ್ಭವಶಾತ್ ತರುಣನು ಕರುವಿಗೆ ತಗಲಿದನು. ದನವು ತರುಣನ ಮೇಲೆ ಆಕ್ರಮಣ ನಡೆಸಿತು. ರಜಪೂತ ತರುಣನು ತುಂಬಾ ಸಾಹಸಿಯಾಗಿದ್ದನು. ಓಡಿಹೋದರೆ ತನ್ನ ಪೌರುಷಕ್ಕೆ ಕಲಂಕ ತಗಲುವುದೆಂದು ಯೋಚಿಸಿಕೊಂಡನೇನೋ! ಕೂಡಲೇ ಒರೆಯಿಂದ ಖಡ್ಗವನ್ನು ಸೆಳೆದು ಏರಿ ಬರುವ ದನದ ಮೇಲೆ ಆಕ್ರಮಿಸಿದನು. ದನವು ಕೋಪಗೊಂಡಿತ್ತು. ಆದುದರಿಂದ ಹೆದರಲಿಲ್ಲ ನನ್ನ ಕಣ್ಣುಗಳೆದುರಿನಲ್ಲಿಯೇ ಆ ರಜಪೂತನು ಆ ಪ್ರೀತಿಯ ದನವನ್ನು ಕೊಂದಿಕ್ಕಿದನು. ನೋಡನೋಡುವಷ್ಟರಲ್ಲಿ ನೂರಾರು ಮಂದಿ ನೆರೆದರು; ನಡೆದ ಸಂಗತಿಯನ್ನು ವಿಚಾರಿಸತೊಡಗಿದರು. ಅಷ್ಟರಲ್ಲಿ ನನ್ನ ತಂದೆಯೂ ಬಂದರು. ಸಂಧ್ಯಾವಂದನೆಗೆ ತೆರಳಿದ್ದ ಅವರು ಬಂದು ಮನೆಯೆದುರಲ್ಲಿ ಜನರ ಗುಂಪು ನೆರೆದಿದ್ದುದನ್ನೂ, ದನವು ನರಳಾಡುತ್ತಿದ್ದುದನ್ನೂ, ಕರು ದುಃಖದಿಂದ ಕೂಗಾಡುತ್ತಿದ್ದುದನ್ನೂ ನೋಡಿದರು. ತಂದೆಯವರ ಸದ್ದನ್ನು ಕೇಳಿದೊಡನೆಯೇ ದನವು ಹೆಚ್ಚೆಚ್ಚು ವೇದನೆಯಿಂದ ಗೋಳಿಟ್ಟಿತು. ತನ್ನ ದೊಡ್ಡ ದೊಡ್ಡ ಕಣ್ಣುಗಳನ್ನು ತಿರುಗಿಸಿ ಯಾಚನೆಯಿಂದ ಅದು ನೋಡಿದಾಗ ತಂದೆಯವರ ಸಿಟ್ಟು ನೆತ್ತಿಗೇರಿತು. ನನ್ನ ತರುವಾಯ ಅವರಿಗೆ ಪ್ರಿಯಕರವಾದುದೆಂದರೆ ಆ ದನವೇ. ಆದುದರಿಂದ ಅವರು ಚೀರಾಡುತ್ತಾ ಕೇಳಿದರು:

"ನನ್ನ ದನವನ್ನು ಯಾರು ಹೊಡೆದವರು ?"

ಯುವಕನು ಲಜ್ಜೆಯಿಂದ ತಲೆತಗ್ಗಿಸಿಕೊಂಡು ಮುಂದೆ ಬಂದು ಹೇಳಿದನು:

"ನಾನು."

"ನೀನು ಕ್ಷತ್ರಿಯನೇ ?"

"ಹೂಂ."

"ಹಾಗಾದರೆ, ಯಾರಾದರೂ ಕ್ಷತ್ರಿಯ ವೀರನೊಡನೆ ಕಾದುವೆಯಾ?"

ರಜಪೂತ ತರುಣನ ಭಂಗಿ ಬದಲಿತು. ಕ್ರೋಧದಿಂದ ಉರಿಯುತ್ತಾ ಹೇಳಿದನು:

"ಯಾರಾದರೂ ಕ್ಷತ್ರಿಯ ವೀರನು ಮುಂದೆ ಬರಲಿ."

ಸಾವಿರಾರು ಮಂದಿ ನೆರೆದಿದ್ದರು. ಆದರೆ ಆ ತರುಣನೆದುರು ಹಾಯಲು ಯಾರಿಗೂ ಧೈರ್ಯ ಬರಲಿಲ್ಲ. ಇದನ್ನು ನೋಡಿ ತಂದೆಯವರೇ ಖಡ್ಗ ಹಿಡಿದು ಅವನ ಮೇಲೆ ಏರಿಹೋದರು. ಅವನೂ ಕತ್ತಿಹಿರಿದನು. ಇಬ್ಬರೂ ಕಾಳಗದಲ್ಲಿ ತೊಡಗಿದರು. ತಂದೆಯವರು ವೃದ್ಧರಿದ್ದರು. ಪೆಟ್ಟು ಬಹಳವಾಗಿ ತಗಲಿತು; ಬಿದ್ದುಬಿಟ್ಟರು. ನೆರೆದ ಜನರು ಅವರನ್ನೆತ್ತಿ ಮನೆಯೊಳಗೆ ತಂದರು. ಮೈ ಹಳದಿ ಬಣ್ಣಕ್ಕೆ ತಿರುಗಿತ್ತು; ಆದರೆ, ಕಣ್ಣುಗಳಿಂದ ಕಿಡಿಗಳು ಉದುರುತ್ತಿದ್ದುವು. ನಾನು ಅಳುತ್ತಾ ಅವರ ಸಮ್ಮುಖಕ್ಕೆ ಹೋದೆನು. ನನ್ನನ್ನು ನೋಡಿದಾಗ ಅವರು, ನೆರೆದೆಲ್ಲವರಿಗೂ ಹೊರಟುಹೋಗುವಂತೆ ಸಂಕೇತಮಾಡಿದರು. ನಾವಿಬ್ಬರೇ ಉಳಿದಾಗ ಅವರು ಹೇಳಿದರು:

"ಮಗಳೇ, ನೀನು ರಜಪೂತ ನಾರಿಯಷ್ಟೆ!"

"ಹೌದಪ್ಪ."

"ರಜಪೂತರು ಮಾತೇ ಸರ್ವಸ್ವವೆಂದು ತಿಳಿಯುವರಲ್ಲವೇ?"

"ಹೂಂ"

"ಈ ರಜಪೂತನು ನನ್ನ ಗೋವನ್ನು ಕೊಂದಿರುವನು. ಇದಕ್ಕೆ ನೀನು ಪ್ರತೀಕಾರಮಾಡಬೇಕಾಗಿದೆ........"

"ತಮ್ಮ ಆಜ್ಞೆಯನ್ನು ಪಾಲಿಸುವೆ."

"ನನಗೆ ಗಂಡುಮಕ್ಕಳಿರುತ್ತಿದ್ದರೆ, ಈ ಹೊರೆಯನ್ನು ನಿನ್ನ ಹೆಗಲಿಗೆ ಏರಿಸುತ್ತಿರಲಿಲ್ಲ."

"ತಮ್ಮ ಆಜ್ಞೆ ಏನಾಗುವುದೋ ಅದನ್ನು ನಾನು ಶಿರಸಾವಹಿಸಿ ನಡೆಸುವೆ."

"ಪ್ರತಿಜ್ಞೆ ಮಾಡುವಿಯಾ?"

"ಹೌದು."

"ಈ ಪ್ರತಿಜ್ಞೆಯನ್ನು ಪೂರೈಸಿ ತೋರಿಸುವೆಯಾ?

"ಎಲ್ಲಿಯ ತನಕ ಈ ದೇಹವು ನನ್ನ ಅಧೀನದಲ್ಲಿರುವುದೋ, ಖಂಡಿತವಾಗಿಯೂ ಪ್ರತಿಜ್ಞೆಯನ್ನು ಪೂರೈಸುವೆನು."

"ಹಾಗಾದರೆ ಈ ಖಡ್ಗವನ್ನು ಸ್ವೀಕರಿಸು. ಎಂದಿನ ತನಕ ಈ ಕತ್ತಿಯು ಆ ರಜಪೂತನ ಕುತ್ತಿಗೆಯ ಮೇಲೆ ಬೀಳುವುದಿಲ್ಲವೋ, ಅದು ತನಕ, ಭೋಗವಿಲಾಸಗಳನ್ನು ತ್ಯಜಿಸು."

"ಇದನ್ನು ಹೇಳುತ್ತಾ ಹೇಳುತ್ತಾ ತಂದೆಯವರ ಉಸಿರು ನಿಂತಿತು. ಆ ದಿನದಿಂದಲೇ ನಾನು ಕತ್ತಿಯನ್ನು ಬಟ್ಟೆಯ ಮರೆಯಲ್ಲಿಟ್ಟುಕೊಂಡು ಆ ರಜಪೂತನಿಗಾಗಿ ಹುಡುಕಾಡುತ್ತಾ ಅಲೆಯುತ್ತಿರುವೆನು. ವರ್ಷಗಳು ಉರುಳಿದುವು. ಒಮ್ಮೊಮ್ಮೆ ಜನವಸತಿಗಳಿರುವಲ್ಲಿಗೆ ಹೋಗುತ್ತಿದ್ದೆನು. ಆಗಾಗ ಕಾಡುಗುಡ್ಡೆಗಳಲ್ಲಿ ಅಲೆದಾಡುತ್ತಿದ್ದೆನು. ಎಲ್ಲಿಯೂ ಅವನ ಸುಳಿವು ತೋರಲಿಲ್ಲ. ಒಂದು ದಿನ ನಾನು ನನ್ನ ಹರಿದುಹೋದ ಭಾಗ್ಯವನ್ನು ನೆನೆದು ಅಳುತ್ತಿದ್ದೆ. ಆಗ ಅದೇ ತರುಣನು ಬರುತ್ತಿದ್ದುದನ್ನು ಕಂಡೆನು. ನನ್ನನ್ನು ನೋಡಿ ಅವನು ಕೇಳಿದನು: "ನೀನು ಯಾರು?" ನಾನು ಹೇಳಿದೆನು:

"ನಾನು ದುಃಖಿತಳಾದ ಬ್ರಾಹ್ಮಣಿ. ತಾವು ನನ್ನ ಮೇಲೆ ದಯೆದೋರಿ ಏನಾದರೂ ತಿನ್ನಲು ಕೊಡಿರಿ."

"ಹಾಗಾದರೆ ನನ್ನೊಡನೆ ಬಾ" ಎಂದು ಅವನು ಹೇಳಿದನು.

"ನಾನು ಎದ್ದು ನಿಂತೆನು. ಮಿಂಚಿನಂತೆ ನಾನು ನನ್ನ ಬಟ್ಟೆಯೊಳಗಿಂದ ಕತ್ತಿಯನ್ನು ಸೆಳೆದು ಅವನ ಮೇಲೆ ಆಘಾತಿಸಿದೆನು. ಇಷ್ಟರಲ್ಲಿ ಬೇರೆ ಕೆಲವರು ಅಲ್ಲಿಗೆ ಬರುತ್ತಿರುವುದು ಕಂಡು ಬಂದಿತು. ನಾನು ಕತ್ತಿಯನ್ನು ಬಿಟ್ಟು ಓಡಿಹೋದೆನು. ಅನಂತರ, ಮೂರು ವರ್ಷಗಳ ತನಕ ಬೆಟ್ಟಕಾಡುಗಳಲ್ಲಿ ಅಡಗಿದ್ದೆನು. ಎಲ್ಲಾದರೂ ಮುಳುಗಿ ಸಾಯಬೇಕೆಂದು ಆಗಾಗ ಎನಿಸುತ್ತಿತ್ತು. ಆದರೆ ಜೀವವು ಬಹಳ ಪ್ರಿಯವಾದುದು. ಎಂತೆಂತಹ ಕಷ್ಟ-ವಿಪತ್ತುಗಳನ್ನು ಅನುಭವಿಸಲಿದೆಯೋ, ಅದನ್ನು ಅನುಭವಿಸುವುದಕ್ಕಾಗಿಯೇ ಇನ್ನೂ ಜೀವಿಸಿರುವೆನು. ಕಾಡಿನಲ್ಲಿ ವಾಸಿಸಿ,

ವಾಸಿಸಿ ಮನಸ್ಸು ರೋಸಿಹೋದಾಗ ಜೋಧಪುರಕ್ಕೆ ಹೊರಟು ಬಂದೆನು. ಇಲ್ಲಿ ತಮ್ಮ ದಯಾಲುತೆಯು ಕುರಿತಾಗಿ ಕೇಳಿದೆನು. ಹಾಗೆ, ತಮ್ಮ ಸೇವೆಗಾಗಿ ಬಂದೆನು ಮತ್ತು ತಮ್ಮ ದಯೆಯಿಂದ ಬಾಳುತ್ತಿರುವೆನು. ಇದೇ ನನ್ನ ರಾಮಾಯಣ."

ರಾಜನಂದಿನಿ ದೀರ್ಘವಾದ ನಿಟ್ಟುಸಿರಿಟ್ಟು ಹೇಳಿದಳು:

"ಜಗತ್ತಿನಲ್ಲಿ ಎಂತೆಂತಹ ಜನರಿರುವರು! ಸರಿ, ನಿನ್ನ ಶಕ್ತಿಯಿಂದ ಆತನ ಕಥೆಯನ್ನು ಮುಗಿಸಿದೆಯಾ?"

"ಎಲ್ಲಿಂದ! ಗಾಯವು ಕ್ಷುಲ್ಲಕವಾಗಿತ್ತು — ಆತನು ಉಳಿದುಕೊಂಡಿರಬೇಕು. ಅವನಂತೆಯೇ ಆಕೃತಿಯುಳ್ಳ ರಜಪೂತನೊಬ್ಬನು. ನಾದಿನಲ್ಲಿ ಬೇಟೆಯಾಡುವುದನ್ನು ನೋಡಿದ್ದೆನು. ಅವನೋ ಅಥವಾ ಬೇರೆಒಬ್ಬನೋ ತಿಳಿಯಲಿಲ್ಲ. ಆಕೃತಿಮಾತ್ರ ಅದೇ."

ವ್ರಜವಿಲಾಸಿನಿ ನಿಟ್ಟುಸಿರಿಟ್ಟು ಹೇಳಿದಳು.

೨

ಕೆಲವು ಮಾಸಗಳು ಕಳೆದುವು. ವ್ರಜವಿಲಾಸಿನಿಯು ಕತೆಯನ್ನು ಕೇಳಿದ ಬಳಿಕ ರಾಜಕುಮಾರಿಯರು ಮೊದಲಿನಂತೆ ಅವಳನ್ನು ಹಾಸ್ಯ ಮಾಡುವ ಕೆಲಸಕ್ಕೆ ಹೋಗದೆ, ಆದಷ್ಟು ಅವಳನ್ನು ಸಂತೋಷದಿಂದಿರುವಂತೆ ನೋಡಿಕೊಳ್ಳುತ್ತಿದ್ದರು. ಅವಳ ಕುರಿತಾಗಿ ಇನ್ನೂ ಹೆಚ್ಚಿನ ಸಹಾನುಭೂತಿಯನ್ನು ತೋರಿಸತೊಡಗಿದರು. ಒಂದು ದಿನ ಆಕಾಶದಲ್ಲಿ ಮೋಡಗಳು ಮುಸುಕಿದುವು. ಆಗ ರಾಜನಂದಿನಿ ಹೇಳಿದಳು:

"ಇಂದು ಬಿಹಾರಿಲಾಲರ 'ಸತಸಈ' ಕೇಳುವುದಕ್ಕೆ ಇಚ್ಛೆಯಾಗುತ್ತಿದೆ. ವರ್ಷಋತುವಿನ ಕುರಿತಾಗಿ ಅದರಲ್ಲಿ ಒಳ್ಳೊಳ್ಳೆಯ ಗೀತೆಗಳಿವೆ."

"ಬಹಳ ಅಮೂಲ್ಯವಾದ ಪುಸ್ತಕ ಗೆಳತಿ. ನಿನ್ನ ಪಕ್ಕದಲ್ಲಿರುವ ಕಪಾಟಿನಲ್ಲಿಯೇ ಆ ಪುಸ್ತಕವಿದೆ——ಸ್ವಲ್ಪ ತೆಗೆದುಬಿಡು." ಎಂದು ದುರ್ಗಾಕುಮಾರಿ ದನಿಗೂಡಿಸಿದಳು.

ವ್ರಜವಿಲಾಸಿನಿಯು ಪುಸ್ತಕ ಎತ್ತಿಕೊಂಡಳು. ಅದರ ಮೊದಲನೆಯ ಪುಟ ತೆರೆದಿದ್ದಳಷ್ಟೆ — ಅವಳ ಕೈಯಿಂದ ಪುಸ್ತಕ ಬಿದ್ದು ಬಿಟ್ಟಿತು.

ಆ ಪುಸ್ತಕದ ಮೊದಲನೆಯ ಪುಟದಲ್ಲಿ ಒಂದು ಚಿತ್ರ ಇಡಲ್ಪಟ್ಟಿತ್ತು. ಅದು ಆ ನಿರ್ದಯನಾದ ತರುಣನ ಚಿತ್ರ; ಅವಳ ತಂದೆಯನ್ನು ಕೊಂದವನ ಚಿತ್ರ. ವ್ರಜವಿಲಾಸಿನಿಯ ಕಣ್ಣುಗಳು ಕೆಂಪೇರಿದುವು. ದೃಷ್ಟಿ ಮೊನೆಯಾಯಿತು. ಅವಳಿಗೆ ತನ್ನ ಪ್ರತಿಜ್ಞೆಯ ನೆನಪಾಯಿತು. ಆದರೆ ಅದರೊಡನೆಯೇ ಅವಳಿಗೆ ವಿಚಾರವೂ ಬಂತು—ಆ ಯುವಕನ ಚಿತ್ರ ಇಲ್ಲಿ ಹೇಗೆ ಬಂದಿರಬಹುದು? ರಾಜಕುಮಾರಿಯರೊಡನೆ ಆತನಿಗೇನು ಸಂಬಂಧ? ತಾನೆಲ್ಲಾದರೂ ಇವರಿಗೆ ಕೃತಜ್ಞಳಾಗಿ, ಪ್ರತಿಜ್ಞೆಯನ್ನು ಪೂರೈಸದಿರುವ ಸಂದರ್ಭ ಬರಬಹುದೇ .........ರಾಜನಂದಿನಿ ಅವಳ ಸ್ಥಿತಿಯನ್ನು ನೋಡಿ ಕೇಳಿದಳು:

"ಏನು ಸಮಾಚಾರ? ಈ ಕ್ರೋಧ ಯಾಕೆ?"

"ಏನಿಲ್ಲ—ಯಾಕೆ ಬದಲಾವಣೆಯಾಯಿತೆಂದು ಗೊತ್ತಿಲ್ಲ." ವ್ರಜವಿಲಾಸಿನಿ ಮೆಲ್ಲಮೆಲ್ಲನೆ ಉತ್ತರಿಸಿದಳು.

ಅಂದಿನಿಂದ ವ್ರಜವಿಲಾಸಿನಿಯ ಮನಸ್ಸಿನಲ್ಲಿ ಇನ್ನೊಂದು ಯೋಚನೆ ಸುಳಿಯತೊಡಗಿತು—ತಾನೇನು ರಾಜಕುಮಾರಿಯರಿಗೆ ಕೃತಜ್ಞಳಾಗಿ ತನ್ನ ಪ್ರತಿಜ್ಞೆಗೆ ತಿಲಾಂಜಲಿ ಕೊಡಬೇಕೇ?

ಹದಿನಾರು ತಿಂಗಳುಗಳ ತರುವಾಯ ಅಫಘಾನಿಸ್ತಾನದಿಂದ ಪೃಥ್ವೀಸಿಂಹ ಮತ್ತು ಧರ್ಮಸಿಂಹರು ಮರಳಿದರು. ಬಾದಶಹನ ಸೇನೆ ಅನೇಕ ಕಷ್ಟಗಳನ್ನು ಅನುಭವಿಸಿತ್ತು. ಹಿಮ ಹೆಚ್ಚು ಹೆಚ್ಚು ಬೀಳತೊಡಗಿತ್ತು. ಪರ್ವತ ಶಿಖರಗಳು ಹಿಮದಿಂದ ಮುಚ್ಚಿದ್ದುವು. ಬರುವ ಹೋಗುವ ದಾರಿ ಮುಚ್ಚಿಹೋಗಿತ್ತು. ಅಡುಗೆಯ ಸಾಮಗ್ರಿಗಳು ಖರ್ಚಾಗತೊಡಗಿದುವು. ಸೈನಿಕರು ಹಸಿವೆಯಿಂದ ಸಾಯತೊಡಗಿದರು. ಇಂತಹ ಕಾಲದಲ್ಲಿ ಅಫಘಾನರು ರಾತ್ರಿಕಾಲದಲ್ಲಿ ಮೇಲೆ ಬಿದ್ದು ಮೊಗಲ ಸೈನ್ಯದ ಕಗ್ಗೊಲೆ ನಡೆಸುತ್ತಿದ್ದರು. ಕೊನೆಯಲ್ಲಿ ಶಹಜಾದ ಮುಹಿಉದ್ದೀನನು ಸೋತು ಸೈನ್ಯದೊಂದಿಗೆ ಮರಳಿ ಬರಬೇಕಾಯಿತು.

ಇಬ್ಬರು ರಾಜಕುಮಾರರೂ ಜೋಧಪುರಕ್ಕೆ ಹತ್ತಿರ ಹತ್ತಿರ ಬಂದಂತೆ ಅವರ ಮನಸ್ಸು ಉತ್ಕಂಠೆಗೊಳ್ಳುತ್ತಿತ್ತು. ಇಷ್ಟು ದೀರ್ಘಕಾಲದ ತರುವಾಯ ಪುನಃ ಭೇಟಿ ಆಗುವುದು. ಮಿಲನದ ಆತುರ ಹೆಚ್ಚುತ್ತಿತ್ತು. ದಿನರಾತ್ರಿ ದಾರಿಯನ್ನು ಕ್ರಮಿಸುತ್ತಿದ್ದರೂ ಆಲಸ್ಯ—ಆಯಾಸಗಳು ಅವರಿಗೆ ಆಗುತ್ತಿರಲಿಲ್ಲ. ಇಬ್ಬರೂ ಗಾಯಗೊಂಡಿದ್ದರೂ ಮುಂದಿನ ಮಿಲನದ

ಆನಂದದಲ್ಲಿ ಅವರ ನೋವು ಮಾಯವಾಗುತ್ತಿತ್ತು. ಪೃಥ್ವೀಸಿಂಹನು ದುರ್ಗಾಕುಮಾರಿಗೆಂದು ಅಫಘಾನಿಸ್ತಾನದ ಕಟಾರಿಯೊಂದನ್ನು ತಂದಿರುವನು. ಧರ್ಮಸಿಂಹನು ರಾಜನಂದಿನಿಗಾಗಿ ಕಾಶ್ಮೀರದ ಬಹು ಅಮೂಲ್ಯದ ಶಾಲುಜೋಡಿಗಳನ್ನು ತಂದಿದ್ದನು. ಇಬ್ಬರ ಹೃದಯಗಳು ಆನಂದದಿಂದ ತುಂಬಿದ್ದುವು.

ವೀರರಿಬ್ಬರೂ ಬರುವ ವಾರ್ತೆ ಕೇಳಿದಾಗ, ರಾಜಕುಮಾರಿಯರಿಬ್ಬರೂ ತಮ್ಮ ಅಂಗಗಳನ್ನು ಶೃಂಗರಿಸಿಕೊಳ್ಳತೊಡಗಿದರು. ಆಭರಣಗಳನ್ನಿಟ್ಟುಕೊಂಡರು. ಅವರ ವರ್ತನೆಯು ಆನಂದದಿಂದ ಕುಣಿದಾಡುತ್ತಿತ್ತು. ಇಷ್ಟು ದಿನಗಳ ವಿರಹದ ತರುವಾಯ ಪುನಃ ಮಿಲನ ಆಗುವುದು! ಆನಂದವು ಅವರ ಕಣ್ಣುಗಳಲ್ಲಿ ಕುಣಿದಾಡುತ್ತಿತ್ತು. ಒಬ್ಬಳು ಇನ್ನೊಬ್ಬಳನ್ನು ಕೆಣಕುವಳು ಮತ್ತು ಸಂತೋಷದಿಂದ ಅಪ್ಪಿಕೊಳ್ಳುವಳು!

ಜೋಧಪುರದ ಕಿಲ್ಲೆಯಿಂದ ತೋಪುಗಳು ಮೊಳಗಿ ಪೃಥ್ವೀಸಿಂಹನ ಬರವನ್ನು ಸಾರಿದುವು. ಕುಮಾರಿಯರಿಬ್ಬರೂ ಕೈಗಳಲ್ಲಿ ಆರತಿಗಳನ್ನು ಹಿಡಿದು ಅರಮನೆಯ ದ್ವಾರಗಳಲ್ಲಿ ನಿಂತುಕೊಂಡರು. ಪೃಥ್ವೀಸಿಂಹನು ದರಬಾರಿಗಳ ವಂದನೆಗಳನ್ನು ಸ್ವೀಕರಿಸುತ್ತಾ ಅರಮನೆಯನ್ನು ಪ್ರವೇಶಿಸಿದನು. ದುರ್ಗಾಕುಮಾರಿ ಆರತಿ ಬೆಳಗಿದಳು. ಇಬ್ಬರೂ ಒಬ್ಬರನ್ನೊಬ್ಬರು ನೋಡಿ ಹರ್ಷಿತರಾದರು. ಧರ್ಮಸಿಂಹನೂ ಬಹಳ ಪ್ರಸನ್ನತೆಯಿಂದ ತನ್ನ ಮಹಲನ್ನು ಮುಟ್ಟಿದನು. ಆದರೆ, ಒಳಗೆ ಪ್ರವೇಶಿಸುವಷ್ಟರಲ್ಲಿಯೇ ತಡೆದುನಿಂತನು – ಅವನ ಎಡಗಣ್ಣು ಅದುರಿತು. ರಾಜನಂದಿನಿಯು ಆರತಿ ತೆಗೆದುಕೊಂಡು ಬಂದಳು. ಆದರೆ, ಕಾಲು ಜಾರಿತು – ಕೈಯಿಂದ ಆರತಿ ಕಿತ್ತು ನೆಲದಲ್ಲಿ ಚೆಲ್ಲಿಹೋಯಿತು. ಧರ್ಮಸಿಂಹನ ಮುಖವು ಕಂದಿಹೋಯಿತು; ರಾಜನಂದಿನಿ ಕಂಗಾಲಾದಳು. ಈ ಅಪಶಕುನ ಯಾಕೆ?

ವ್ರಜವಿಲಾಸಿನಿ ಇಬ್ಬರೂ ರಾಜಕುಮಾರರ ಬರವನ್ನು ತಿಳಿದು ಇಬ್ಬರಿಗೂ ಸಮರ್ಪಿಸುವುದಕ್ಕೆಂದು ಎರಡು ಅಭಿನಂದನಾ ಪತ್ರಿಕೆಯನ್ನು ರಚಿಸಿದ್ದಳು. ಪ್ರಾತಃಕಾಲದಲ್ಲಿ ಪೃಥ್ವೀಸಿಂಹನು ನಿತ್ಯಕರ್ಮಗಳನ್ನು ತೀರಿಸಿ ಬಂದಾಗ ವ್ರಜವಿಲಾಸಿನಿ ಅಲ್ಲಿಗೆ ಬಂದು ತನ್ನ ಅಭಿನಂದನಾ ಪತ್ರಿಕೆಯನ್ನು ಸಮರ್ಪಿಸಿದಳು. ಪೃಥ್ವೀಸಿಂಹನು ಪ್ರಸನ್ನತೆಯಿಂದ ಅದನ್ನು ಸ್ವೀಕರಿಸಿದನು. ಕವಿತೆಯೂ ಅಷ್ಟೇನೂ ಮಹತ್ವದಲ್ಲದಿದ್ದರೂ ಅದರಲ್ಲಿ

ಹೊಸತನವಿತ್ತು ಮತ್ತು ಅದು ವೀರರಸದಿಂದ ತುಂಬಿ ತುಳುಕಾಡುತ್ತಿತ್ತು. ವೀರರಸದ ಪ್ರೇಮಿಯಾದ ಕುಮಾರನು, ಅದನ್ನೋದಿ ಸಂತೋಷಗೊಂಡು ಹಾರವನ್ನು ಉಪಹಾರವಿತ್ತನು.

ವ್ರಜವಿಲಾಸಿನಿ ಅಲ್ಲಿಂದ ಕುಮಾರ ಧರ್ಮಸಿಂಹನ ಬಳಿಗೆ ನಡೆದಳು. ಅವನು ಕುಳಿತುಕೊಂಡು ರಾಜನಂದಿನಿಗೆ ರಣರಂಗದ ಕತೆಯನ್ನು ಹೇಳುತ್ತಿದ್ದನು. ವ್ರಜವಿಲಾಸಿನಿಯ ದೃಷ್ಟಿ ಅವನ ಮೇಲೆ ಬಿದ್ದಾಗ, ಅವಳು ಸ್ತಂಭಿತಳಾಗಿ ಹಿಂಜರಿದಳು. ಅವಳನ್ನು ನೋಡಿದೊಡನೆಯೇ ಧರ್ಮಸಿಂಹನ ಬಣ್ಣವೂ ಬದಲಾಯಿತು. ತುಟಿ ಒಣಗಿತು. ಕೈಕಾಲುಗಳು ಕಂಪಿಸಿದುವು. ವ್ರಜವಿಲಾಸಿನಿ ಅಲ್ಲಿಂದ ಕೂಡಲೇ ಹಿಂದಿರುಗಿದಳು. ಧರ್ಮಸಿಂಹನು ಹಾಸಿಗೆಯಲ್ಲಿ ಬಿದ್ದುಕೊಂಡು ಕೈಗಳಿಂದ ಮುಖವನ್ನು ಮುಚ್ಚಿಕೊಂಡನು. ರಾಜನಂದಿನಿ ಈ ದೃಶ್ಯವನ್ನು ನೋಡಿದಾಗ ಗುಲಾಬಿಯಂತಹ ಅವಳ ಮುಖವು ಕಂದಿಹೋಯಿತು. ಧರ್ಮಸಿಂಹನು ಇಡೀ ದಿನ ಮಂಚದಲ್ಲಿ ಮೌನಿಯಾಗಿ ಮಲಗಿಕೊಂಡು ಹೊರಳಾಡುತ್ತಿದ್ದನು. ವರ್ಷಾನುಗಟ್ಟಲೆಯ ರೋಗಿಯಂತೆ ತೋರತೊಡಗಿದನು. ರಾಜನಂದಿನಿ ಅವನ ಸೇವೆಯಲ್ಲಿ ತೊಡಗಿದ್ದಳು. ದಿನವಿಡೀ ಹಿಗೆಯೇ ಕಳೆಯಿತು. ಸಂಜೆಯಲ್ಲಿಯೂ ಅವನು ಹಾಗೆಯೇ ಒರಗಿದ್ದನು. ವಿಷಯವೇನೆಂದು ತಿಳಿಯದೆ ರಾಜನಂದಿನಿ ಕಂಗಾಲಾದಳು. ವ್ರಜವಿಲಾಸಿನಿ ಆಶಿಸುತ್ತಿರುವುದು ಇವನ ವಧೆಗಾಗಿಯೇ? ತನ್ನ ಪ್ರಿಯನು ಅಷ್ಟು ಕಠೋರ ಹೃದಯನಿರಬಹುದೆಂಬುದು ಸಂಭವನೀಯವೇ? ಇಲ್ಲ.........ಇಲ್ಲ......... ಹಾಗೆಂದೂ ಇರಲಾರದು. ತನ್ನ ಮನಸ್ಸಿನ ಭಾವನೆಗಳಿಂದ ಅವನ ಮನಸ್ಸಿನ ಭಾರವನ್ನು ಹಗುರಗೊಳಿಸಲು ಅವಳು ಬಯಸುತ್ತಿದ್ದಳು. ಆದರೆ, ಅದು ಹೇಗೆ ಸಾಧ್ಯ? ಕೊನೆಯಲ್ಲಿ ಸಿದ್ಪ್ರದೇವಿ ಅವಳನ್ನು ತನ್ನ ಉತ್ಸಂಗದಲ್ಲಿ ಏರಿಸಿಕೊಂಡಳು.........

೪

ರಾತ್ರಿ ಕೊನೆಗೊಳ್ಳುತ್ತಾ ಬರುತ್ತಿತ್ತು. ಬಾನಿನಲ್ಲಿ ಕತ್ತಲೆ ಕವಿದಿತ್ತು. ಸಾರಸಪಕ್ಷಿಯ ದುಃಖದ ಕೂಗು ಆಗಾಗ ಕೇಳಿಬರುತ್ತಿತ್ತು. ದುರ್ಗದ ಕಾವಲುಗಾರರು ಅಲ್ಲಲ್ಲಿ ಕೂಗಿಕೊಳ್ಳುತ್ತಿದ್ದರು. ರಾಜನಂದಿನಿ

ಒಮ್ಮೆಗೇ ತನ್ನ ಕಣ್ಣುಗಳನ್ನು ತೆರೆದು ನೋಡಿದಾಗ ಪಲ್ಲಂಗದಲ್ಲಿ ಧರ್ಮಸಿಂಹನಿರಲಿಲ್ಲ. ಅವಳು ಗಾಬರಿಯಾದಳು. ಅಲ್ಲಿಂದಲೇ ಪ್ರಜಾವಿಲಾಸಿನಿಯು ಕೋಪದಿಂದ ಕದದ ಕಡೆಗೆ ನಡೆದು ಬಾಗಿಲಲ್ಲಿ ನಿಂತುಕೊಂಡು ಒಳಗೆ ಇಣಿಕಿದಳು. ಅವಳ ಸಂಶಯವು ಪೂರ್ಣವಾಯಿತು. ಅವಳು ನೋಡುವುದೇನು! ಪ್ರಜಾವಿಲಾಸಿನಿ ಕೈಯಲ್ಲಿ ಕತ್ತಿ ಹಿಡಿದು ನಿಂತಿರುವಳು; ಅವಳ ಎದುರಿಗೆ ಸಾಮಾನ್ಯ ಮಾನವನಂತೆ ದೀನನಂತೆ ಧರ್ಮಸಿಂಹನು ಕೈಜೋಡಿಸಿ ಮೊಣಕಾಲೂರಿ ಕುಳಿತಿರುವನು. ಇದನ್ನು ನೋಡಿದೊಡನೆಯೇ ರಾಜನಂದಿನಿಯ ರಕ್ತವು ಆರಿಹೋಯಿತು; ತಲೆತಿರುಗಿತು; ಕೈಕಾಲು ಕಂಪಿಸತೊಡಗಿದುವು. ನೆಲಕ್ಕೆ ಬಿದ್ದುಬಿಡುವಂತೆನಿಸಿತು. ಅವಳು ತನ್ನ ಕೊಠಡಿಗೆ ಬಂದು ಮುಖಮುಚ್ಚಿಕೊಂಡು ಮಲಗಿದಳು. ಆದರೆ ಕಣ್ಣಿನಿಂದ ಒಂದು ಹನಿ ಕಣ್ಣೀರೂ ಒಸರಲಿಲ್ಲ!

ಮರುದಿನ ಬಹಳ ಬೆಳಗ್ಗೆಯೇ ಪೃಥ್ವೀಸಿಂಹ ಧರ್ಮಸಿಂಹನ ಬಳಿಗೆ ಬಂದು ಹೇಳಿದನು — "ಹವೆಯು ಬಹಳ ಉತ್ತಮವಾಗಿದೆ. ಬೇಟೆಯಾಡಲು ಬರುವಿಯಾ?"

"ಹೂ — ನಡೆ" ಧರ್ಮಸಿಂಹನು ಸಮ್ಮತಿಸಿದನು.

ಇವರಿಬ್ಬರೂ ಕುದುರೆಯನ್ನೇರಿಕೊಂಡು ಕಾಡಿನ ಕಡೆಗೆ ನಡೆದರು. ತಾವರೆಯಂತೆ ಪೃಥ್ವೀಸಿಂಹನ ಮನಸ್ಸು ಅರಳಿತ್ತು. ಅಂಗ ಅಂಗಗಳಲ್ಲಿಯೂ ಚಪಲತೆ ನಲಿದಾಡುತ್ತಿತ್ತು. ಆದರೆ, ಮುಖದಲ್ಲಿ ಕಳೆಯೇ ಇರಲಿಲ್ಲವೆನ್ನುವಂತೆ ಧರ್ಮಸಿಂಹನಿಗೆ ಮಾಲಿನ್ಯ ಕವಿದಿತ್ತು. ಪೃಥ್ವೀಸಿಂಹನು ಅವನನ್ನು ಬಹು ಬಾರಿ ಅಣಕಿಸಿದನು. ಆದರೆ ಅವನು ಅತ್ಯಂತ ದುಃಖದಿಂದ ತಿಳಿದಾಗ ಸುಮ್ಮನಾದನು. ಇಬ್ಬರೂ ಕಾಡಿನ ಅಂಚಿಗೆ ಬಂದು ಮುಟ್ಟಿದರು. ಒಮ್ಮೆಗೆ ಧರ್ಮಸಿಂಹನು ತಡೆದು ಹೇಳಿದನು.

"ನಾನು ಕಳೆದ ರಾತ್ರಿ ಒಂದು ದೃಢ ಪ್ರತಿಜ್ಞೆ ಮಾಡಿರುವೆ" ಇಷ್ಟನ್ನು ಹೇಳುತ್ತಾ ಅವನ ಕಣ್ಣುಗಳು ಕಂಬನಿ ಸುರಿದವು.

ಗಾಬರಿಯಾಗಿ ಪೃಥ್ವೀಸಿಂಹ ಕೇಳಿದನು:

"ಎಂತಹ ಪ್ರತಿಜ್ಞೆ ?"

"ನೀನು ಪ್ರಜಾನಿಲಾಸಿನಿಯ ಗೋಳು ಕೇಳಿರುವೆಯಾ? ಅವಳ ತಂದೆಯನ್ನು ಕೊಂದವನನ್ನು ಉಳಿಸಬಾರದೆಂದು ನಾನು ಪ್ರತಿಜ್ಞೆ ಮಾಡಿರುವೆನು".

"ನಿಜವಾಗಿಯೂ ವೀರಪ್ರತಿಜ್ಞೆಯನ್ನೇ ಮಾಡಿರುವೆ."

"—ಹೂಂ, ಅದನ್ನು ನಾನು ಪೂರೈಸಲು ಶಕ್ತನಾದರೆ, ನಿನ್ನ ವಿಚಾರ ಹೇಗೆ—ಅಂತಹ ವ್ಯಕ್ತಿಯು ಕೊಲ್ಲಲು ಅರ್ಹನಲ್ಲವೇ?"

"ಅಂತಹ ನಿರ್ದಯಿಯ ಕುತ್ತಿಗೆಯನ್ನು ಕಡಿಯಲೇಬೇಕು."

"ಭೇಷ್. ಇದೇ ನನ್ನ ವಿಚಾರ ಕೂಡ. ನಾನೇನಾದರೂ ಯಾವ ದಾದರೊಂದು ಕಾರಣಕ್ಕಾಗಿ ನನ್ನ ಪ್ರತಿಜ್ಞೆಯನ್ನು ಪೂರೈಸಲು ಅಶಕ್ಯನಾದರೆ, ಅದನ್ನು ನೀನು ನೆರವೇರಿಸುವೆಯಾ?"

"ಬಹಳ ಸಂತೋಷದಿಂದ ಆದರೆ, ಅವನನ್ನು ಗುರುತಿಸಿರುವೆಯಾ?"

"ಖಂಡಿತವಾಗಿಯೂ."

"ಹಾಗಾದರೆ ಉತ್ತಮವಾಯಿತು. ಈ ಕಾರ್ಯ ನನಗೇ ಬಿಟ್ಟು ಬಿಡು. ನಿನಗೆ ಒಂದು ವೇಳೆ ಆತನ ಮೇಲೆ ದಯೆ ಬಂದರೂ ಬರ ಬಹುದು."

"ಒಳ್ಳೆಯದು. ಆದರೆ ಆ ವ್ಯಕ್ತಿ ತುಂಬಾ ಭಾಗ್ಯಶಾಲಿಯೆಂಬದನ್ನು ನೆನಪಿಡು. ಎಷ್ಟೋ ಬಾರಿ ಆತನು ಮೃತ್ಯುವಿನ ಬಾಯಿಯಿಂದ ತಪ್ಪಿಸಿ ಬಂದಿರುವನು. ಅಲ್ಲದೆ, ನಿನಗೂ ಆತನ ಮೇಲೆ ದಯೆ ಬರುವ ಸಂದರ್ಭವಿದೆ. ಆದುದರಿಂದ, ಅವನನ್ನು ಕೊಂದೇ ತೀರುವೆನೆಂದು ಪ್ರತಿಜ್ಞೆ ಮಾಡು."

"ದುರ್ಗಾಕುಮಾರಿಯ ಆಣೆಯಿಟ್ಟು ಹೇಳುವೆ—ಅವನನ್ನು ಕೊಂದೇ ತೀರುತ್ತೇನೆ."

"ಸರಿ. ಇಬ್ಬರೂ ಸೇರಿ ಕಾರ್ಯಸನ್ನದ್ಧರಾಗೋಣ. ಪ್ರತಿಜ್ಞೆಯ ಕುರಿತು ದೃಢನಾಗಿರುವಿಯಲ್ಲವೇ?"

"ಏನು? ನಾನು ಯೋಧನಲ್ಲವೇ? ಒಮ್ಮೆ ಮಾಡಿದ ಪ್ರತಿಜ್ಞೆಯನ್ನು ಪ್ರಾಣಹೋದರೂ ಬಿಟ್ಟು ಬಿಡುವೆನೇ?"

"ಎಂದೆಂದಿಗೂ?"

"ಎಂದೆಂದಿಗೂ."

"ಅವನೇನಾದರೂ ನಿನ್ನ ಬಂಧುವಾಗಿದ್ದರೆ?"

ಪೃಥ್ವೀಸಿಂಹನು ಧರ್ಮಸಿಂಹನನ್ನೇ ವಿಚಾರಪೂರ್ವಕವಾಗಿ ನೋಡುತ್ತಾ ಹೇಳಿದನು.

"ಬಂಧುವಾಗಿದ್ದರೆ?"

"ಹೂಂ— ಅವನೇನಾದರೂ ನಿನ್ನ ಸಂಬಂಧಿಕನೇ ಆಗಿರುವ ಸಂಭವವಿದೆ."

"ಯಾರೇ ಆಗಿರಲಿ— ನನ್ನ ಸೋದರನೇ ಇರಲಿ— ಖಂಡಿತವಾಗಿ ಕತ್ತಿ ಯೆತ್ತುವೆನು."

ಧರ್ಮಸಿಂಹನು ಕುದುರೆಯಿಂದ ಕೆಳಗಿಳಿದನು. ಅವನ ಮೈಯು ಕಂದಿಹೋಗಿತ್ತು, ತುಟಿಗಳು ನಡುಗುತ್ತಿದ್ದುವು. ಅವನು ಸೊಂಟದಿಂದ ಖಡ್ಗವನ್ನು ತೆಗೆದು ನೆಲದ ಮೇಲಿಟ್ಟು ಹೇಳಿದನು:

"ಪೃಥ್ವೀಸಿಂಹ, ತಯಾರಾಗು. ಆ ದುಷ್ಟನು ಸಿಕ್ಕಿದನು."

ಪೃಥ್ವೀಸಿಂಹ ಚಕಿತನಾಗಿ ಅತ್ತಿತ್ತ ನೋಡಿದನು. ಆದರೆ, ಧರ್ಮಸಿಂಹನಲ್ಲದೆ, ಬೇರಾರೂ ಅಲ್ಲಿರಲಿಲ್ಲ.

"ಖಡ್ಗ ಸೆಳೆ."

"ಇಲ್ಲ— ನನಗೆ ಆತನು ಕಾಣಲಿಲ್ಲ."

"ಅವನು ನಿನ್ನ ಮುಂದೆಯೇ ನಿಂತಿರುವನು. ಆ ದುಷ್ಟ ಕುಕರ್ಮಿಯು ಧರ್ಮಸಿಂಹನೇ."

ಪೃಥ್ವೀಸಿಂಹನು ಗಾಬರಿಯಿಂದ ಸ್ತಬ್ಧನಾದನು.

"ಹಾ! ನೀನೇ— ನಾನು—"

"ರಜಪೂತನೇ, ನಿನ್ನ ಪ್ರತಿಜ್ಞೆಯನ್ನು ಪೂರೈಸು."

"ಇದನ್ನು ಕೇಳಿದೊಡನೆಯೇ, ಮಿಂಚಿನಂತೆ ಪೃಥ್ವೀಸಿಂಹನು ತನ್ನ ನಡುವಿನಿಂದ ಖಡ್ಗವನ್ನು ಸೆಳೆದು ಧರ್ಮಸಿಂಹನ ಎದೆಯನ್ನು ತಿವಿದು ಬಿಟ್ಟನು. ಖಡ್ಗವು ಹಿಡಿಯ ತನಕ ಧರ್ಮಸಿಂಹನನ್ನು ಭೇದಿಸಿತು. ರಕ್ತದ ಕಾಲುವೆ ಹರಿಯಿತು. ಧರ್ಮಸಿಂಹನು ನೆಲದ ಮೇಲೆ ಬೀಳುತ್ತಾ ನುಡಿದನು:

"ಪೃಥ್ವೀಸಿಂಹ ನಿನಗೆ ನಾನು ಕೃತಜ್ಞನು. ನೀನು ನಿಜವಾಗಿಯೂ ವೀರನು. ನೀನು ಪುರುಷನ ಕರ್ತವ್ಯವನ್ನು ಪುರುಷನಂತೆ ಪೂರೈಸಿರುವೆ."

ಇದನ್ನು ಕೇಳುತ್ತಾ ಪೃಥ್ವೀಸಿಂಹ ನೆಲದ ಮೇಲೆ ಕುಳಿತುಕೊಂಡು ಅಳತೊಡಗಿದನು.

೫

ಇಂದು ರಾಜನಂದಿನಿ ಸಹಗಮನ ಮಾಡುವಳು. ಅವಳು ಹದಿನೇಳು ಬಗೆಗಳಿಂದ ಶೃಂಗರಿಸಿಕೊಂಡು, ಆಭರಣ— ಹೂಗಳನ್ನಿಟ್ಟುಕೊಂಡಿರುವಳು. ಕೈಗಳಲ್ಲಿ ಸೌಭಾಗ್ಯದ ಬಳೆಗಳಿವೆ. ಕಾಲುಗಳಿಗೆ ಅಲತಿಗೆಯ ಕೆಂಪು ಬಳಿದಿದೆ. ಅವಳು ಕೆಂಪು ರುಮಾಲುವುಟ್ಟಿರುವಳು. ಮೈಕೈಗಳಿಂದ ಸುವಾಸನೆ ಹೊರಹೊಮ್ಮುವುದು.........ಅವಳು ಈ ದಿನ 'ಸತಿ'ಯಾಗುವಳು.

ಅವಳು ಸೂರ್ಯನಂತೆ ಉಜ್ಜಲೆಯಾಗಿರುವಳು. ಅವಳೆಡೆಗೆ ನೋಡುವುದರಿಂದ ಕಣ್ಣುಗಳು ಕೋರೈಸಿ ಹೋಗುವುವು. ಪ್ರೇಮೋನ್ಮತ್ತಳಾಗಿರುವುದರಿಂದ ಅವಳ ಕಣ್ಣುಗಳಿಂದ ಅಲೌಕಿಕ ಪ್ರಕಾಶವು ಹೊರಚಿಮ್ಮುವುದು. ಇಂದವಳು ಸ್ವರ್ಗದ ದೇವಿಯಾಗುವಳು. ತನ್ನ ಪ್ರಿಯ ಪತಿಯ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಅವಳು ಚಂದನದ ಚಿತೆಯನ್ನು ಏರುವಳು.

ನಗರದ ಜನರೆಲ್ಲರೂ ಈ ದೃಶ್ಯವನ್ನು ನೋಡಲೆಂದು ಉತ್ಕಂಠಿತರಾಗಿ ಬರುವರು. ವಾದ್ಯಗಳು ಮೊಳಗುವುವು; ಹೂವಿನ ಮಳೆ ಹರಿಯುವುದು.........ಸತಿಯು ಚಿತೆಯ ಮೇಲೆ ಕುಳಿತಿದ್ದಳು. ಅಷ್ಟರಲ್ಲಿ ಪೃಥ್ವೀಸಿಂಹನು ಬಂದು ಕೈಜೋಡಿಸಿ ಕೇಳಿಕೊಂಡನು.

"ಮಹಾರಾಣಿ, ನನ್ನ ಅಪರಾಧವನ್ನು ಕ್ಷಮಿಸು."

ಸತಿ ಉತ್ತರಿಸಿದಳು:

"ನೀನು ಕ್ಷಮಿಸಲ್ಪಡಲಾರೆ. ಒಬ್ಬ ಯುವಕ ರಜಪೂತನನ್ನು ನೀನು ಕೊಂದಿರುವಿ; ನೀನೂ ಕೂಡ ನಿನ್ನ ತಾರುಣ್ಯದಲ್ಲೇ ಕೊಲ್ಲಲ್ಪಡುವೆ."

ಸತಿಯ ವಚನವು ಎಂದಾದರೂ ಸುಳ್ಳಾಗುವುದೇ?

ಚಿತೆಗೆ ಬೆಂಕಿ ಇಟ್ಟರು. ಜಯಜಯಕಾರ ಮೊಳಗಿತು. ಬೆಂಕಿಯಲ್ಲಿ ಸತಿಯ ಮುಖವು ಉದಯಸೂರ್ಯನಂತೆ ಹೊಳೆಯುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಅಲ್ಲಿ ಬೂದಿಯ ರಾಶಿಯಲ್ಲದೆ ಬೇರೇನೂ ಉಳಿಯಲಿಲ್ಲ.

ಆ ಸತಿಯ ಮನಸ್ಸಿನಲ್ಲಿ ಎಂತಹ ದೃಢತೆ ಇತ್ತು! ಮೊನ್ನೆ ಧರ್ಮಸಿಂಹನ ಎದುರಿನಿಂದ ಚಕಿತೆಯಾಗಿ ವ್ರಜವಿಲಾಸಿನಿ ಹೋದಾಗಲೇ ಅವಳ ಮನಸ್ಸಿನಲ್ಲಿ ಸಂದೇಹ ಮೂಡಿತ್ತು! ಆದರೆ, ರಾತ್ರಿ ತನ್ನ ಪತಿ ವ್ರಜವಿಲಾಸಿನಿಯ ಮುಂದೆ ಮೊಣಕಾಲೂರಿದ್ದಾಗ, ಅವಳ ಮನದಲ್ಲಿ ನಿಶ್ಚಯವು ಮೂಡಿತ್ತು. ಆಗಲೇ ಅವಳು ದೃಢಳಾಗಿದ್ದಳು. ಬೆಳಗ್ಗೆ ಧರ್ಮಸಿಂಹನು ಎದ್ದಾಗ ತಾನು ವ್ರಜವಿಲಾಸಿನಿಯ ಶತ್ರುವಿನ ತಲೆಯನ್ನು ಇಟ್ಟಿರುವೆನೆಂದೂ ಧರ್ಮಸಿಂಹನು ಅದನ್ನು ತರಬೇಕೆಂದೂ ಅವನಿಗೆ ಹೇಳಿದ್ದಳು. ಹಾಗೆಯೇ ಆಯಿತು. ತಾನು ಸತಿಯಾಗಲು ಎಲ್ಲಾ ಕಾರಣಗಳನ್ನೂ ಸಂಪಾದಿಸಿ ತಾನಾಗಿಯೇ ಹುಡುಕಿದ್ದಳು. ಯಾಕೆಂದರೆ ಅವಳಲ್ಲಿ ಸತ್ಯಕ್ಕಾಗಿ ದೃಢತೆಯಿತ್ತು. ಆದರೆ, ಪಾಪದ ಬೆಂಕಿ ಹೇಗೆ ಆರುವುದು? ಒಂದು ಪಾಪವು ಎಷ್ಟು ಜೀವಗಳನ್ನು ಉರಿಸಿತು? ರಾಜವಂಶದ ಇಬ್ಬರು ಕುಮಾರರು ಮತ್ತು ಕುಮಾರಿಯರು ನೋಡನೋಡುವಷ್ಟರಲ್ಲಿ ಈ ಅಗ್ನಿಕುಂಡದಲ್ಲಿ ಅರ್ಪಣೆಯಾದರು. ಸತಿಯ ಮಾತು ಸತ್ಯವಾಯಿತು. ಏಳೇ ಏಳು ವಾರಗಳೊಳಗೆ ಧಿಲ್ಲಿಯಲ್ಲಿ ಪೃಥ್ವೀಸಿಂಹನು ಕೊಲ್ಲಲ್ಪಟ್ಟನು. ದುರ್ಗಾಕುಮಾರಿ ಸಹಗಮನ ಮಾಡಿದಳು.



# ಗೌರೀ—ಶಂಕರ

೧

ಅರಾವಳಿ ಬೆಟ್ಟಗಳಲ್ಲಿ ವಸಂತಕಾಲದ ಸಂಧ್ಯೆಯು ತನ್ನ ಮೋಹನ ಇಂದ್ರಜಾಲವನ್ನು ಬೀರಿತ್ತು. ಬೆಟ್ಟದ ತರುಲತೆಗಳು ಪಲ್ಲವ ಪುಷ್ಪಗಳಿಂದ ರಂಜಿತವಾಗಿದ್ದುವು. ಹಕ್ಕಿಗಳಿಂಚರ ಬೆಟ್ಟದ ಸಾನುಕಂದರಗಳನ್ನು ಸ್ಪಂದಿಸುತ್ತಿತ್ತು. ಗಿರಿನಿರ್ಝರಗಳು ತಳವಿಡಿದು ಸಳಸಳನೆ ಬಂಡೆಯಿಂದ ಬಂಡೆಗೆ ನೆಗೆಯುತ್ತಾ ಹರಿಯುತ್ತಿದ್ದುವು.

ತೊರೆಯೊಂದರ ದಡದಲ್ಲಿ ಕಿಂಶುಕ ವೃಕ್ಷವೊಂದು ತನ್ನ ಬಾಹುಗಳನ್ನು ಚಾಚಿ ನಿಂತಿತ್ತು. ಅದರ ಪ್ರಸಂಶ ಪುಷ್ಪಗಳಿಂದ ಪಾರ್ಶ್ವವರ್ತಿ ಕಾನನವಿಡೀ ರಕ್ತರಂಜಿತವಾಗಿ ತೋರುತ್ತಿತ್ತು. ಗುಚ್ಛವಿದಳಿತ ಕುಸುಮಗಳು ನಿರ್ಝರದ ನೀರಲ್ಲಿ ಬಿದ್ದು ಅದನ್ನು ಹೋಳಿಯ ಓಕುಳಿಯಂತೆ ಪರಿವರ್ತಿಸಿದ್ದುವು. ಕಿಂಶುಕ ಪಾದಪದ ಪಾದದಲ್ಲಿ ಹಾಸಿದ ಪದರು ಶಿಲೆಯ ಮೇಲೆ ನದಿಯ ನೀರಲ್ಲಿ ಕಾಲು ಬಿಟ್ಟುಕೊಂಡು ತರುಣ ವೀರರೆಂಬತಿಬ್ಬರು ಕುಳಿತಿದ್ದರು. ಹಿರಿಯವಳು ಕಪ್ಪಗೆ; ಕುಳ್ಳಗೆ. ಕಿರಿಯವಳು ತೆಳ್ಳಗೆ; ಬೆಳ್ಳಗೆ. ಅವರ ವಸ್ತ್ರಾಭೂಷಣಗಳು ರಾಜಯೋಗ್ಯವಾಗಿದ್ದುವು. ನೋಡಿದಾಗ ರಾಜಕುಮಾರರಾರೋ ವನವಿಹಾರಕ್ಕೆ ಬಂದು ವಿಶ್ರಾಂತಿ ಪಡೆಯುತ್ತಿದ್ದಂತೆ ತೋರುತ್ತಿತ್ತು.

ನದಿಯ ನೀರಲ್ಲಿ ಕಾಲನ್ನು ಆಡಿಸಿದಾಗ, ನೀರಲ್ಲಿ ತರಂಗಗಳೆದ್ದು ಚಕ್ರಾಕಾರವಾಗಿ ಸುತ್ತುತ್ತಾ ದೂರ ವರ್ತುಲದಲ್ಲಿ ಸರಿಯುತ್ತಿದ್ದುವು. ಆ ತರಂಗದ ಸುಳಿಗಳಲ್ಲಿ ಕಿಂಶುಕಗಳು ಸುಳಿಸುಳಿದು ಮುಳುಗುತ್ತಿದ್ದುವು; ಮುಳುಮುಳುಗಿ ಏಳುತ್ತಿದ್ದುವು. ಕಿರಿ ತರುಣನು ಈ ಆಟವನ್ನು ಸ್ವಲ್ಪ ಹೊತ್ತು ಆಡುತ್ತಿದ್ದು, ಹಾಗೆಯೇ ಹಿರಿಯವನನ್ನು ಕರೆದನು:

"ಚಂಪಾ!"

"ಏನು — ರಾಜಕುಮಾರಿ?"

ಹಿರಿಯವನು ಪ್ರಶ್ನಿಸಿದನು.

"ಚಂಪಾ! ನೋಡು— ಹಾಗೆ ಕರೆಯಬಾರದೆಂದು ನಿನಗೆ ಎಷ್ಟು ಬಾರಿ ಹೇಳಿಲ್ಲ ನಾನು? ಈಗ ನಾನು ರಾಜಕುಮಾರ; ಕುಮಾರಿಯಲ್ಲ...."

ಚಂಪಾ, ಈ ಗಂಡುಡುಗೆಯಲ್ಲಿ ನಾನಿರುವಾಗ ಪುರುಷನ ಭಾವನೆ ನನ್ನ ಮನವನ್ನು ಆವರಿಸುತ್ತದೆ; ನಾನು ಸ್ತ್ರೀಯೆಂಬ ನಿಜಸ್ಥಿತಿ ಮರೆತೇ ಹೋಗುತ್ತದೆ. ಚಂಪಾ, ಪ್ರಕೃತಿಯ ಈ ಆಡುಂಬೊಲದಲ್ಲಿ ಕುಳಿತು ನಾನು ಈಗ ಯಾವ ಕನಸನ್ನು ಕಾಣುತ್ತಿರುವೆ ಬಲ್ಲೆಯಾ ?"

"ಆಗಲೇ ಕನಸು ಕಾಣಲೂ ಆರಂಭಿಸಿದಿರಾ? ಮತ್ತಾವ ಕನಸು— ಅದೇ......"

"ಚಂಪಾ, ನಮ್ಮ ಜ್ವಾಲಾ ದುರ್ಗವು ಭಾರತದ ವಿಶಾಲ ಸಾಮ್ರಾಜ್ಯವಾಗಿ ಮೆರೆಯುವ ಕನಸು ನನ್ನನ್ನು ಅರಿವು– ಮರೆವಿನಲ್ಲೂ ಕಾಡುತ್ತದೆ. ತಂದೆಯವರು ಈ ಜ್ವಾಲಾದುರ್ಗವನ್ನು ರಚಿಸಿದಾಗ ಎಷ್ಟೊಂದು ಮಹತ್ವಾಕಾಂಕ್ಷೆಯಿಟ್ಟುಕೊಂಡಿದ್ದರು. ಅದರಲ್ಲಿ ಒಂದಾದರೂ ನೆರವೇರಿತೇ"

"ಯಾಕೆ ನೆರವೇರಲಿಲ್ಲ– ದೇವಿ? ಜ್ವಾಲಾದುರ್ಗದ ಪ್ರಜೆಗಳಿಗೆ ಮಹಾರಾಜರು ನೆಮ್ಮದಿ– ಶಾಂತಿಗಳನ್ನು ಒದಗಿಸಿಕೊಟ್ಟಿಲ್ಲವೇ? ಭಾರತ ವರ್ಷದ ಇನ್ನಾವ ರಾಜ್ಯದಲ್ಲಿರುವ ಪ್ರಜೆಗಿಂತಲೂ ಇಲ್ಲಿನ ಪ್ರಜೆಗಳು ಸುಖಿಗಳು; ಸ್ವತಂತ್ರರು. ರಾಜನಾದವನ ಕರ್ತವ್ಯಗಳಲ್ಲಿ ಇನ್ನಾವುದು ಬಾಕಿಯಿದೆ?"

"ಅಂತಹ ಸುಖವನ್ನು ಭಾರತದೆಲ್ಲೆಡೆಯೂ ಹರಡಬೇಕೆಂಬುದು ತಂದೆಯವರ ಕನಸಾಗಿತ್ತು. ಅದು ಹಾಗೆಯೇ ಉಳಿಯಿತು ಅವರ ಈ ವೃದ್ಧಾಪ್ಯದಲ್ಲಿಯೂ ಅವರನ್ನು ಅದು ನೆಮ್ಮದಿಯಿಂದಿರಿಸುವುದಿಲ್ಲ....... ರಾಜ್ಯವನ್ನು ಅವರು ಸ್ಥಾಪಿಸಿದರು; ಅದನ್ನು ಬೆಳೆಸುವ ಭಾರವಿನ್ನು ಅವರ ಸಂತಾನದ ಕೈಯಲ್ಲಿ."

"ಮಹಾರಾಜರ ಕನಸು ನಿಶ್ಚಯವಾಗಿಯೂ ಕೈಗೂಡದಿರದು. ಅವರ ವೀರಪುತ್ರಿಯು ಯಾವ ಕ್ಷತ್ರಿಯ ಕುಮಾರನಿಗೂ ಕಡಮೆಯಿಲ್ಲವೆಂಬುದನ್ನು ಅವರು ತಿಳಿದೇ ಇದ್ದಾರೆ."

"ಚಂಪಾ, ಸದ್ಯದಲ್ಲಿಯೇ ಜ್ವಾಲಾ ದುರ್ಗದ ಮೇಲೆ ವಿಪತ್ತು ಕವಿಯುವಂತೆ ತೋರಿ ಬರುತ್ತಿದೆ. ಪ್ರಜೆಗಳು ಇದು ತನಕ ಅನುಭವಿಸುತ್ತಿದ್ದ ನೆಮ್ಮದಿ–ಶಾಂತಿಗಳನ್ನು ಅವರಿನ್ನು ರಣಯಜ್ಞದ ಕುಂಡದಲ್ಲಿ ಬಲಿಯೀಯಬೇಕಾಗುವುದು......"

"ಅದೆಲ್ಲವೂ ರಾಜಕುಮಾರಿಯ ಚಿತ್ತವೃತ್ತಿಯನ್ನೇ ಅವಲಂಬಿಸಿದೆ. ನೀವು ಸಮ್ಮತಿಸಿದರೆ......"

ಎನ್ನುತ್ತಾ ಚಂಪಕಾ ರಾಜಕುಮಾರಿಯ ಮುಖವನ್ನು ಮರ್ಮ ಭೇದಕದೃಷ್ಟಿಯಿಂದ ವೀಕ್ಷಿಸಿದಳು. ಕುಮಾರಿಯ ಮುಖದಲ್ಲಿ ದುಃಖದ ಕ್ರೋಧದ ಛಾಯೆ ದಟ್ಟೈಸಿತ್ತು. ಹುಬ್ಬುಗಳು ಬಿಗಿದಿದ್ದುವು. ಕಣ್ಣು ಗಳು ಆರಕ್ತವಾಗಿದ್ದುವು. ಶ್ವಾಸೋಚ್ಛ್ವಾಸ ದ್ರುತಗತಿಯಿಂದ ನಡೆಯು ತ್ತಿತ್ತು. ರಾಜಕುಮಾರಿಯ ಭಾವ ಪರಿವರ್ತನೆ ಚಂಪೆಯ ಬಾಯನ್ನು ತಡೆಯಿತು.

"ಚಂಪಾ, ನಾನು ಸಮ್ಮತಿಸುವ ಮಾತನ್ನು ಇನ್ನು ನನ್ನೆದುರು ತೆಗೆಯಬೇಡ."

ರಾಜಕುಮಾರಿ ಆಜ್ಞಾಪಿಸಿದಳು.

ಅನಂತರ ಮೌನ ಕವಿಯಿತು. ಕ್ಷಣಕ್ಷಣಕ್ಕೂ ಕತ್ತಲೆ ಕವಿಯುತ್ತಾ ಬರುತ್ತಿತ್ತು. ನಿಶಾವರಣದಲ್ಲಿ ಕಿಂಶುಕದ ರಕ್ತವರ್ಣವು ನೀಲಿಯಾಗ ತೊಡಗಿತ್ತು. ನದಿಯು ಆಳಕ್ಕಿಳಿಯುತ್ತಿದ್ದಂತೆ ತೋರಲಾರಂಭಿಸಿತು. ಕಾನನದ ತರು ಲತಾ ಗುಲ್ಮಗಳು ತಮ್ಮೆದೆಯೊಳಗೇನೋ ರಹಸ್ಯವನ್ನು ಬಚ್ಚಿಟ್ಟುಕೊಂಡಂತೆ ತೋರಲಾರಂಭಿಸಿದುವು.

ಅಷ್ಟರಲ್ಲಿ ಕಾನನಾಂತರಾಳದಿಂದ ಮೃದು ಮಧುರ ವೇಣುನಿನಾದವು, ಸುರಭಿಪೂರಿತ ಮಂದಮಾರುತನೊಡನೆ ತೇಲಿಬಂದಿತು. ಅದು ರಾಜ ಕುಮಾರಿಯ ಮೇಲೆ ವಿಲಕ್ಷಣ ಮಾಯಾಜಾಲವನ್ನು ಬೀರಿತು. ಕುಮಾ ರಿಯ ಅಕುಂಚಿತವಾದ ಭ್ರುಕುಟಿಗಳು ಸರಳವಾದುವು; ಆರಕ್ತವಾದ ನೇತ್ರಗಳು ನೀಲವಾಗಿ ಕಾಂಕ್ಷೆಯ ಉಪಾಯನವನ್ನು ಧರಿಸಿ ಹತ್ತೂ ದಿಕ್ಕಿಗೆ ತಿರುಗಾಡಿದುವು. ಚಂದ್ರೋದಯದ ಜ್ಯೋತ್ಸ್ನಾ ಸುಧಾವರ್ಷಣಕ್ಕೆ ವಿಕ ಸಿಸುವ ಕೈರವ ಕುಸುಮದಂತೆ ಅವಳ ಮುಖವು ಅರಳಿತು. ಬಗೆಯಲ್ಲಿ ಉತ್ಸಾಹ ತುಂಬಿತು.

ಆಗಲೇ ಸಂಜೆಯಾದುದರ ಅರಿವಾಗಿ ಚಂಪಾ ನುಡಿದಳು:

"ಕುಮಾರಿ, ಇನ್ನು ಹೊರಡೋಣವೇ? ಮಹಾರಾಜರು ಚಿಂತಿತ ರಾಗಿರಬಹುದು."

ರಾಜಕುಮಾರಿ, "ಹೂಂ" ಎಂದಳು. ಇಬ್ಬರೂ ಶಿಲಾಪೀಠಗಳಿಂ ದೆದ್ದು ನಿಧಾನವಾಗಿ ಹೆಜ್ಜೆಯಿಕ್ಕಿದರು. ಒಡತಿಯರ ಹೆಜ್ಜೆಯ ಸದ್ದು ಕೇಳಿ

ಸಿದೊಡನೆಯೇ ಹತ್ತಿರದ ಮರಕ್ಕೆ ಬಿಗಿದಿದ್ದ ಕುದುರೆಗಳು ಸ್ವಾಗತದ ಹೇಷಾರವಗೈದುವು. ಇಬ್ಬರೂ ಕುದುರೆಗಳ ಮೈನೇವರಿಸಿ, ಬೆನ್ನ ಮೇಲೆ ಜಿಗಿದರು.

ಮರುಕ್ಷಣದಲ್ಲಿ ಕುದುರೆಗಳ ಖುರಪುಟ ಧ್ವನಿಗೆ ಕಾನನಾಂತರ ತರಂಗಿತವಾಯಿತು; ವೇಣುನಾದವು ಅದರಲ್ಲಿ ಅಡಗಿಹೋಯಿತು....

೨

ರಾಜಕುಮಾರಿ ಗೌರಿದೇವಿಗೆ ಆ ರಾತ್ರಿ ನಿದ್ರೆ ಬರಲಿಲ್ಲ. ಕಾಡಿನಲ್ಲಿ ಕೇಳಿದ ಮುರಲೀನಾದವು ಅವಳ ಕಿವಿಯಲ್ಲಿ ಗುಂಯ್ಗುಡುತ್ತಿತ್ತು. ಮಗ್ಗುಲು ಬದಲಾಯಿಸುತ್ತಾ ಹಾಗೂ ಹೀಗೂ ಮಧ್ಯ ರಾತ್ರಿ ಕಳೆದಳು.

ರಾಜಕುಮಾರಿಯ ಸಖಿಯಾದ ಚಂಪಕೆಗೆ ಆಯಾಸದಿಂದ ಕಣ್ಣು ತೂಗುತ್ತಿದ್ದರೂ ಮನಸ್ಸು ಜಾಗೃತವಾಗಿತ್ತು. ರಾಜಕುಮಾರಿಗೆ ತನ್ನ ಮೇಲೆ ಬಂದಿದ್ದ ರೋಷ ಇನ್ನೂ ಇಳಿದಿಲ್ಲವೆಂದೇ ಅವಳ ಹೆದರಿಕೆ. ಸಂಜೆಯಿಂದ ಅವರೊಳಗೆ ಹೆಚ್ಚಿನ ಮಾತುಕತೆ ನಡೆದಿರಲಿಲ್ಲ. ರಾಜಕುಮಾರಿಯ ಸಿಟ್ಟನ್ನು ಇಳಿಸುವುದು ಹೇಗೆಂದೇ ಅವಳು ಚಿಂತಿಸುತ್ತಿದ್ದಳು.

ರಾತ್ರಿಯ ನಾಲ್ಕನೆಯ ಜಾವದಲ್ಲಿ ಗೌರೀದೇವಿಗೆ ಕಣ್ಣೆವೆ ಕೂಡಿತು. ಆ ಅರೆನಿದ್ದೆಯಲ್ಲಿಯೇ ಅವಳಿಗೆ ಸ್ವಪ್ನ ಕಂಡಿತು: -

“ಚಂದನಾ ನದಿಯ ವಕ್ಷದಲ್ಲಿ ರಾಜಕುಮಾರಿಯೊಬ್ಬಳೇ ನದಿವಿಹಾರ ಹೊರಟಿದ್ದಳು. ನದಿಯು ಧೀರಗಂಭೀರವಾಗಿ ಹರಿಯುತ್ತಿತ್ತು. ನದಿಯೆದೆಯಲ್ಲಿ ರಾಜಕುಮಾರಿಯ ನೌಕೆಯು ಮಂದಗಮನದಿಂದ ಮುನ್ನುಗ್ಗುತ್ತಿತ್ತು. ಅನುಕೂಲವಾದ ಮಂದಮಾರುತವು ಪರ್ವತದ ಕಾನನ ಕುಸುಮಗಳ ಗಂಧವನ್ನು ಹೊತ್ತು ಒಸಗೆ ತರುತ್ತಾ ಅವಳನ್ನು ಓಲೈಸುವಂತೆ ತೋರುತ್ತಿತ್ತು. ಹೀಗೆಯೇ, ಸುಖ ಸಾಮ್ರಾಜ್ಯದಲ್ಲಿ ದೋಣಿಯ ವಿಜಯಯಾತ್ರೆ ನಡೆಯಿತು. ನೌಕೆ ಎಷ್ಟೋ ಕ್ರೋಶಗಳಷ್ಟು ದೂರ ನಡೆದಿರಬೇಕು ಅಲ್ಲಿ ನದಿಯ ಪ್ರವಾಹದ ಸೆಳವು ಹೆಚ್ಚಿತ್ತು. ನದಿಯಂಚುಗಳಲ್ಲಿ ದಟ್ಟವಾಗಿ ಬೆಳೆದ ಮರಗಿಡ ಬಳ್ಳಿಗಳಲ್ಲಿ ವಸಂತರಾಜನು ತನ್ನ ವಿಜಯೋತ್ಸವದ ಪತಾಕೆಯನ್ನು ಏರಿಸಿದ್ದನು. ಕಾನನಾಂತರದಿಂದ ಕೋಗಿಲೆಗಳ ಕೂಜನ ಕೇಳಿಬರುತ್ತಿತ್ತು. ರಾಜಕುಮಾರಿ ಆ ದೃಶ್ಯವನ್ನು ಸವಿ

A.B.K. Raja

ಯುತ್ತಾ ಸವಿಯುತ್ತಾ ಆನಂದಿಸುತ್ತಿದ್ದಂತೆಯೇ, ಅವಳ ಮನಸ್ಸಿನಲ್ಲಿ ಏಕಾಕಿನಿಯ ಭಾವನೆ ನುಸುಳಿತು. ಅತ್ತಿತ್ತ ನೋಡಿದಾಗ ಯಾರೂ ತೋರಲಿಲ್ಲ. ಸಖಿ ಚಂಪಕೆಯನ್ನಾದರೂ ಕರೆದು ತಂದಿದ್ದರೆ ಲೇಸಾಗಿತ್ತೆಂದು ತೋರಿತು. ಅತ್ತಿತ್ತ ಚಡಪಡಿಸಿ ಕೊನೆಗೆ ದನಿಯೆತ್ತಿ ಕರೆದಳು:

“ಚಂಪಾ, ಚಂಪಕಾ!....”

ಕಾಡಿನ ಮಧ್ಯದಿಂದ ಉತ್ತರ ಬಂದಂತೆ ತೋರಿತು. ಕಿವಿಗೊಟ್ಟು ಕೇಳಿದಳು: ಅಲ್ಲ; ಉತ್ತರವಲ್ಲ–ಅವಳ ಕರೆಯೇ ಕಾಡಿನಲ್ಲಿ ಪ್ರತಿಧ್ವನಿಸುತ್ತಿತ್ತು. ಅವಳ ಮನಸ್ಸು ಬೇಸರದಿಂದ ಕುಗ್ಗಿತು.

ನದಿಯ ತರಂಗಗಳು ಎದ್ದೆದ್ದು ನರ್ತಿಸತೊಡಗಿದುವು. ನಾವೆ ಕುಣಿಯ ತೊಡಗಿತು. ಅವಳ ಕಿವಿಗಳೂ ಚುರುಕಾದುವು; ಕೇಳಿದಳು— ಎಲ್ಲಿಂದಲೋ ಮೋಹನ ಮುರಲೀನಾದವು ಕೇಳಿ ಬರುತ್ತಿತ್ತು. ಕತ್ತೆತ್ತಿ ಸುತ್ತಲೂ ನೋಡಿದಳು. ನಾದ, ಎಲ್ಲಿಂದ ಬರುತ್ತಿತ್ತೆಂದು ಅವಳಿಗೆ ತಿಳಿಯಲಿಲ್ಲ. ನಾವೆಯ ಕರ್ಣಧಾರನಿಗೆ, ನಾವೆಯನ್ನು ದಡಕ್ಕೊಯ್ಯಲು ಆಜ್ಞಾಪಿಸಿದಳು. ಅವನು ಮರುನುಡಿದನು:

‘ರಾಜಕುಮಾರಿ, ನದಿಯಲ್ಲಿ ಬಿರುಗಾಳಿ ಬೀಸತೊಡಗಿದೆ. ನಾವೆಯನ್ನು ದಡಸೇರಿಸುವ ಪ್ರಯತ್ನದಲ್ಲೇ ಇದ್ದೇನೆ. ಹೇಗೋ–ದೈವ ಕೃಪೆ ಬೇಕು.”

ದೇವರಿಗೆ ಮೊರೆಯಿಟ್ಟು ಅವನು ದೋಣಿಯನ್ನು ದಡಸೇರಿಸಲು ಪ್ರಯತ್ನಿಸತೊಡಗಿದನು

ರಾಜಕುಮಾರಿಯ ಮನಸ್ಸಿನಲ್ಲೂ ಬಿರುಗಾಳಿಯೆದ್ದಿತು ಹಾಗಾದರೆ, ಕೇಳಿದುದು ವೇಣುವಿನ ಮೋಹಕ ಗಾನವಲ್ಲ; ಬಿರುಗಾಳಿಯ ಮಾರಕ ಗಾನ!

ಸಿಥಾರ್ಲದಿಂದ ರಾಜಕುಮಾರಿ ಕುಳಿತಲ್ಲಿಂದ ಎದ್ದಳು ಆದರೆ, ಫಲಕಾಣಲಿಲ್ಲ—ನಾವೆ, ಆಗಲೇ ಮುಳುಗ ತೊಡಗಿತ್ತು. ರಾಜಕುಮಾರಿ ಹೆದರಿಕೆಯಿಂದ ಕೂಗಿಕೊಂಡಳು. ..ನೌಕೆ ಮುಳುಗಿತು; ನದಿಯಾಳವನ್ನು ಸೇರಿತು.....ಅಲ್ಲೊಂದು ಮಂದಿರ. ಅಲ್ಲಿ ಆಶ್ರಯ ಪಡೆದು ರಾಜಕುಮಾರಿ ಸುತ್ತಲೂ ನೋಡಿದಳು: ಆ ಮಂದಿರದ ನಾಲ್ಕು ಗೋಡೆ

ಗಳಿಂದ ಮುರಲೀನಾದ ಕೇಳಿಬರುತ್ತಿತ್ತು. ಆದರೆ ಆ ಗೋಡೆಗಳು ಮಾತ್ರ ರಕ್ತರಂಜಿತವಾಗಿದ್ದುವು......"

ರಾಜಕುಮಾರಿಗೆ ಸ್ವಪ್ನ ಭಂಗವಾಯಿತು. ನೋಡಿದಳು: ಚಂಪಕಾ ಅವಳ ಬಳಿ ನಿಂತು ಅವಳ ಹಣೆಯನ್ನು ನೇವರಿಸುತ್ತಿದ್ದಳು. ರಾಜಕುಮಾರಿಗೆ ಎಚ್ಚರವಾದುದನ್ನು ಕಂಡು ಸಮಾಧಾನದ ಉಸಿರುಬಿಟ್ಟು ಕೇಳಿದಳು:

"ಯಾಕೆ ರಾಜಕುಮಾರಿ—ಕೂಗಿಕೊಂಡಿರಿ? ಚಂಪಾ, ಚಂಪಕಾ, ಎಂದಿರಲ್ಲ?"

ಕೂಗಿದೆನೇ?.. ...ಹೂಂ—ಇರಬೇಕು; ಏನೋ ಸ್ವಪ್ನ ಬಿದ್ದಿತ್ತು."

"ಏನು ಕುಮಾರಿ, ಅಂತಹ ಭಯಂಕರ ಸ್ವಪ್ನ?"

"ಹೋಗು ಚಂಪಾ, ಮಲಗಿಕೋ—ಬೆಳಗಾಗಲಿ; ಹೇಳುತ್ತೇನೆ."

ಸಖಿ ವಿಧೇಯತೆಯಿಂದ ಮಲಗಿಕೊಂಡಳು. ಆದರೆ ರಾಜಕುಮಾರಿಗೆ ಅನಂತರ ನಿದ್ರೆ ಹತ್ತಲಿಲ್ಲ. ನದಿಯಾಳದ ಆ ಮಂದಿರ ಅವಳ ಕಣ್ಣಿಗೆ ಕಟ್ಟಿತ್ತು—ಅದರ ಗೋಡೆಗಳಿಂದ ಹೊರಡುವ ದಿವ್ಯ ಗಾಯನ ಕಿವಿಗೆ ಕೇಳೈಸಿತ್ತು.

ಅಂದು ಬೆಳಗಾಗುವ ಮೊದಲೇ ರಾಜಕುಮಾರಿ ಎದ್ದಳು. ಅವಳ ಮನಸ್ಸು ಚಂಚಲವಾಗಿತ್ತು. ಮುಖದಲ್ಲಿ ಏನೋ ದೀಪ್ತಿ ಉಜ್ವಲಿಸುತ್ತಿತ್ತು.

ದಿವ್ಯ ಮಂಜುಳ ಪ್ರಭಾತವು ಅರಾವಳಿಯ ಕಾನನವನ್ನು ಸಚೇತನವನ್ನಾಗಿ ಮಾಡಿತು. ಕೋಟ್ಯಂತರ ಕುಸುಮಗಳು ಕಣ್ಣೆವೆ ತೆರೆದುವು; ಲಕ್ಷಾಂತರ ಶುಕ-ಕೋಕಿಲಗಳು ಪ್ರಭಾತಗೀತೆ ಹಾಡಿದುವು.

ರಾಜಕುಮಾರಿ ಅಲಂಕಾರ ಗೃಹವನ್ನು ಹೊಕ್ಕು, ತರುಣ ವೇಷ ಭೂಷಣಗಳನ್ನು ಧರಿಸಿ ಹೊರಡಲನುವಾದಳು. ಚಂಪಾ ಎಲ್ಲವನ್ನೂ ನೋಡಿದಳು. ತನ್ನ ಮೇಲಿನ ಸಿಟ್ಟು ಕುಮಾರಿಗೆ ಇಳಿದಿಲ್ಲವೆಂಬುದು ಅವಳಿಗೆ ಖಚಿತವಾಯಿತು. ಇಲ್ಲವಾದರೆ, ತನ್ನನ್ನು ಬಿಟ್ಟು ಒಬ್ಬಳೇ ಆಗಿ ರಾಜಕುಮಾರಿ ಹೊರಟುದುಂಟೇ?

ಮೆಲ್ಲಮೆಲ್ಲನೆ ಅಂಗುವರಿಯ ಬಳಿಸಾರಿ ಚಂಪಾ ಕೇಳಿದಳು:

"ರಾಜಕುಮಾರಿ, ನಾನು ಬರುವುದು ಬೇಡವೇ?"

"ಬೇಡ – ಈ ದಿನ ನನ್ನೊಬ್ಬಳನ್ನೇ ಹೋಗಗೊಡು."

ಚಂಪಾ, ಮಾರ್ನುಡಿಯಲಿಲ್ಲ.

"ಚಂಪಾ, ನನ್ನ ಆ ಕೊಳಲನ್ನು ಇತ್ತ ಕೊಡು."

ಚಂಪಾ ಹೋಗಿ, ರಾಜಕುಮಾರಿಗೆ ಪ್ರಿಯವಾದ ಕೊಳಲನ್ನು ತಂದು ಕೊಟ್ಟಳು. ರಾಜಕುಮಾರಿ, ಕೊಳಲನ್ನು ಕೈಯ್ಯಲ್ಲಿ ಹಿಡಿದುಕೊಂಡು ಸೌಧದಿಂದ ಹೊರ ನಡೆದು, ರಾಜಾಂಗಣದಲ್ಲಿ ನಿಂತಿದ್ದ ತನ್ನ ಕುದುರೆಯ ನ್ನೇರಿದಳು. ಹೋಗುತ್ತಾ ಹೋಗುತ್ತಾ ಹಿಂತಿರುಗಿ ನೋಡಿದಳು —

ಪ್ರಭಾತದ ಸ್ವರ್ಣಾರುಣ ಕಾಂತಿಯಲ್ಲಿ ಜ್ವಾಲಾದುರ್ಗ ಕಂಗೊಳಿ ಸುತ್ತಿತ್ತು.

ರಾಜಕುಮಾರಿ ಗೌರೀದೇವಿಯನ್ನು ಹೊತ್ತು ಕುದುರೆಯು ದಿನವಿಡೀ ಅರಾವಳಿಯ ಸುಂದರ–ಗಂಭೀರವಾದ ಬೆಟ್ಟ ಕಾಡುಗಳಲ್ಲಿ ತಿರುಗಾಡಿತು. ಆದರೂ ಕುದುರೆಗೂ ಆಯಾಸವಾಗಲಿಲ್ಲ. ಅವಳಿಗೂ ಆಯಾಸವಾಗ ಲಿಲ್ಲ ಹೀಗೆ ಹಲವು ಬಾರಿ, ಬಾಲ್ಯದಿಂದಲೂ ಅವಳು ಕಾಡು ಬೆಟ್ಟ ತಿರುಗಿದ್ದುಂಟು. ಆದರೆ, ಇಂದು ಎಂದಿನಂತಲ್ಲ. ಕಾನನದ ಮನ ಮೋಹಕ ಸೌಂದರ್ಯ ಇಂದು ಅವಳ ಮನಸ್ಸನ್ನು ಸೆರೆಹಿಡಿಯುವುದಿಲ್ಲ; ಉನ್ಮಾದಿಸುವುದಿಲ್ಲ. ಕಾಡುಬೆಟ್ಟಗಳಲ್ಲಿ ಇಂದು ಅವಳ ಕಿವಿ ಯಾವು ದನ್ನೋ ಆಲಿಸಲು ಯತ್ನಿಸುವುದು; ಕಣ್ಣು ಹುಡುಕಾಡುವುದು.

ಮಧ್ಯಾಹ್ನವಾಯಿತು. ಅವಳ ಮನಸ್ಸಿನ ಕುತೂಹಲ ಕರಗಿ, ಚಿಂತೆ ಕವಿಯಿತು. ಉತ್ಸಾಹ ಕುಂದಿತು. ಕುದುರೆಯನ್ನು ಹಿಂದಿನ ದಿನ ಸಂಜೆ ಕುಳಿತಿದ್ದ ನಿರ್ಜರಿಣಿಯ ತೀರದತ್ತ ತಿರುಗಿಸಿದಳು. ಅಲ್ಲಿ, ಕುದುರೆಯಿಂದಿ ಳಿದು ಬಳಿಯ ಮರಕ್ಕೆ ಅದನ್ನು ಬಿಗಿದು, ಅದೇ ಶಿಲಾಪ್ರಸರದಲ್ಲಿ ಕುಳಿ ತಳು. ಕಾಲುಗಳು ನೀರಿನಲ್ಲಿ ಈಜಾಡಿದುವು. ಅದೇ ಕಿಂಶುಕವೃಕ್ಷ ದಿಂದ, ಗಾಳಿಯೊಂದು ಬೀಸಿ, ಪುಷ್ಪಪರಾಗಗಳ ಸೇಸೆಯನ್ನು ಅವಳ ಶಿರದ ಮೇಲೆ ಸುರಿಸಿತು. ಗೌರೀದೇವಿ, ತನ್ನ ಕೊಳಲನ್ನು ತುಟಿಗಿಟ್ಟು, ನುಡಿಸ ತೊಡಗಿದಳು. ಅವಳ ತುಟಿಗಳಿಂದ ಹೊರಟ ಉಸಿರು ವೇಣುವಿನ ಸಪ್ತ ರಂಧ್ರಗಳಲ್ಲಿ ಸುತ್ತಿ ಸುಳಿದು ದಿವ್ಯ ಸಂಗೀತವಾಗಿ, ಸುತ್ತಲೂ ಪ್ರಸರಿಸಿ ಕಾನನಾಂತರದಲ್ಲಿ ಪ್ರತಿಧ್ವನಿತವಾಯಿತು.

ನಿಮಿಷಗಳು ಕಳೆದು ಗಳಿಗೆಗಳಾದುವು. ಸಂಗೀತವನ್ನು ಕಿವಿ ನಿಗುರಿಸಿ ಕೇಳುತ್ತಾ ಇದ್ದ ಅವಳ ಕುದುರೆ, ಎಚ್ಚರಿಕೆಯನ್ನು ಸೂಚಿಸುವ

ಹೇಷಾರವ ಮಾಡಿತು. ಗಾಯನದಲ್ಲಿ ಮೈಮರೆತಿದ್ದ ಗೌರೀದೇವಿಗೆ ಅದು ಕೇಳಿಸಲೇ ಇಲ್ಲ.

ಕೊನೆಗೊಮ್ಮೆ ಕುಮಾರಿ ಕೊಳಲಿನಿಂದ ತುಟಿಗಳನ್ನಗಲಿಸಿ ಕಣ್ಣೆತ್ತಿ ನೋಡಿದಳು: ತರುಣನೊಬ್ಬನು ಅವಳ ಬಳಿಯಲ್ಲಿ ನಿಂತಿದ್ದನು. ಸಂಗೀತ ಸುಧೆ ಅವನ ಮೇಲೆ ಮಂತ್ರಜಾಲವನ್ನು ಹೆಣೆದಿತ್ತು. ರಾಜಕುಮಾರಿ ಕಣ್ಣಿಟ್ಟು ಅವನನ್ನು ನೋಡಿದಳು:

ವಿಶಾಲವಾದ ಎದೆಕಟ್ಟಿನ, ಆಜಾನುಬಾಹುವಾದ ಯುವಕನು ನಿಂತಿದ್ದನು. ಅವನ ಮುಖದಲ್ಲಿ ಯೌವನದ ಸೌಂದರ್ಯ ಪ್ರತಿಫಲಿತವಾಗಿತ್ತು. ಕಣ್ಣುಗಳಲ್ಲಿ ಯಾವುದೋ ಸ್ವರ್ಗೀಯ ಮಾಧುರ್ಯ ಅನುರಂಜಿತವಾಗಿತ್ತು. ಧರಿಸಿದ್ದ ಬಟ್ಟೆಬರೆ ತೀರಾ ಸಾಮಾನ್ಯವಿದ್ದುವು. ತಲೆಗೆ ಕಟ್ಟಿದ್ದ ಮುಂಡಾಸಿನಲ್ಲಿ ನವಿಲ ಗರಿಯೊಂದು ತೊನೆದಾಡುತ್ತಿತ್ತು. ಸೊಂಟದಲ್ಲಿ ಖಡ್ಗ, ಬೆನ್ನಲ್ಲಿ ಬತ್ತಳಿಕೆ ಮತ್ತು ಹೆಗಲಲ್ಲಿ ಬಿಲ್ಲುಗಳೂ ತೂಗಾಡುತ್ತಿದ್ದುವು.

ರಾಜಕುಮಾರಿ ಅವನನ್ನು ಪ್ರಶ್ನಿಸಿದಳು:

"ಅಪರಿಚಿತ ತರುಣ, ನೀನು ಯಾರು?"

"ನನ್ನ ಹೆಸರು 'ಗಿರಿ ಶಂಕರ'"

ಎಂದನು ಆ ತರುಣ.

"ಆದರೆ, ನೀನು ಶಂಕರನಂತಿಲ್ಲ; ಕೃಷ್ಣನಂತೆ ತೋರುತ್ತಿರುವಿ!"

ತರುಣ ಮುಗುಳ್ನಕ್ಕನು. ಆ ನಗು ಸಾವಿರ ಅರ್ಥವನ್ನು ರಾಜಕುಮಾರಿಗೆ ತಿಳಿಸಿತು.

"ನೀನು ಯಾರು ಯುವಕ? ಇಲ್ಲಿ ಯಾಕೆ ಕೊಳಲನ್ನು ನುಡಿಸುತ್ತಿರುವೆ?"

"ನಾನು ಗೌರಾಂಗಸಿಂಹ. ಚಿತ್ರಲಾ ದುರ್ಗದ ಸೈನಿಕರಲ್ಲೊಬ್ಬ......ಇಲ್ಲಿ ಹೀಗೆಯೇ ಯಾವಾಗಲೂ ಬಂದು, ಬೇಸರ ಕಳೆಯಲು ಕೊಳಲೂದುತ್ತಿರುವೆ."

"ಹುಂ......ನೀನು ಗೌರಾಂಗನಂತೆ ತೋರುವುದಿಲ್ಲ..."

"ಯಾಕಿಲ್ಲ?"

"ಜ್ವಾಲಾದುರ್ಗದಲ್ಲಿ ಆ ಹೆಸರಿನವರನ್ನು ನಾನರಿಯೆ."

"ಹಾಗಾದರೆ, ಅಲ್ಲಿನವರೆಲ್ಲರೂ ನಿನಗೆ ಪರಿಚಿತರೇನು?"

"ಹೌದು—ಎಲ್ಲರೂ. ಅಲ್ಲದೆ, ನೀನು ಸುಳ್ಳು ನುಡಿಯುತ್ತಿರುವೆ ತರುಣ. ಈ ಮೊದಲೆಂದೂ ಇಲ್ಲಿ ನೀನು ಕೊಳಲೂದಿದುದನ್ನು ನಾನು ಕೇಳಿಲ್ಲ."

ತರುಣನು ಅವಳತ್ತ ದಿಟ್ಟಿಸಿನೋಡಿದನು. ಅವಳು ಮಾರ್ನುಡಿಯಲಿಲ್ಲ. ನಸುನಗೆ ಅವಳ ತುಟಿಗಳೆಡೆಯಲ್ಲಿ ಕಾದಿತ್ತು.

ಗಿರಿಶಂಕರನು ಮಾತನ್ನು ಮುಂದುವರಿಸಿದನು:

"ಆದರೆ, ಈ ಶಿಲಾವಾಟಿಕೆಯಲ್ಲಿ ಆಗಾಗ ನೀನು ನಿನ್ನ ಸಂಗಾತಿಯೊಡನೆ ಕುಳಿತಿದ್ದುದನ್ನು ಕಂಡಿರುವೆ......ರಾಜಕುಮಾರೀ...."

ರಾಜಕುಮಾರಿ ಬೆಚ್ಚಿದಳು. ತರುಣನು ಅವಳ ನಿಜತ್ವವನ್ನು ಬಯಲಿಗೆಳೆದಿದ್ದನು.

ನೆತ್ತಿಗೇರಿದ್ದ ಸೂರ್ಯನು ಪಶ್ಚಿಮದ ಬದಿಗೆ ವಾಲತೊಡಗಿದ್ದನು. ಗಾಳಿಯ ವೇಗ ಹೆಚ್ಚಾಗತೊಡಗಿತ್ತು. ಮಧ್ಯಾಹ್ನದಲ್ಲಿ ಬಾಯಾರಿ ನೀರು ಕುಡಿಯಲೆಂದು ನದಿಯ ತೀರಕ್ಕೆ ಬರುತ್ತಿದ್ದ ಹುಲ್ಲೆ ಹರಿಣಗಳು ತರುಣ-ತರುಣಿಯರನ್ನು ಬಳಿಯಲ್ಲಿ ನೋಡಿ ಬೆರಗಿನ ನೋಟವನ್ನು ಸುಳಿಯುತ್ತಿದ್ದುವು.

ಹರಿಣಗಳಂತಹ ಅದೇ ಬೆರಗಿನ ನೋಟವನ್ನು ರಾಜಕುಮಾರಿ, ಗಿರಿಶಂಕರನತ್ತ ಹೊರಳಿಸಿ ಕೇಳಿದಳು:

"ನೀನು ಇಲ್ಲಿ ಯಾಕಾಗಿ ಬಂದೆ?"

ವಿನಯದಿಂದ ತಲೆಬಾಗಿ ಗಿರಿಶಂಕರನು ನುಡಿದನು:

"ಜ್ವಾಲಾದುರ್ಗದ ರಾಜಕುಮಾರಿ ಬೆರಗಾಗುವ ಕಾರಣವಿಲ್ಲ. ರಾಜಕುಮಾರಿಯ ಸೇವಾವೃತ್ತಿಯನ್ನು ಸ್ವೀಕರಿಸಲು ದಾಸನು ಬಂದಿರುವನು."

"ವೀರನೇ, ನಿನ್ನಂತಹ ವೀರರ ಆವಶ್ಯಕತೆ ಜ್ವಾಲಾದುರ್ಗಕ್ಕೆ ಉಂಟಾಗಿದೆ. ನೀನು ಅಲ್ಲಿಗೇಕೆ ಬರಬಾರದು?"

"ರಾಜಕುಮಾರಿಯ ಅಪ್ಪಣೆ ಶಿರೋಧಾರ್ಯವಾದುದು. ಈ ದಾಸನ ಆವಶ್ಯಕತೆಯುಂಟಾದಾಗ, ನಾನು ಬಂದೇ ಬರುವೆನು"

ರಾಜಕುಮಾರಿಗೆ ವಿನೀತನಾಗಿ ವಂದಿಸಿ ನುಡಿದನು ಗಿರಿಶಂಕರ.

೩

ಅರಾವಳೀ, ಬೆಟ್ಟಗಳ ಸೆರಗಿನ ಮರೆಯಲ್ಲಿ ಜ್ವಾಲಾದುರ್ಗವು ಸುರಕ್ಷಿತವಾಗಿದೆ. ಅದರ ಮಹಾರಾಜನಾದ ಕೀರ್ತಿಸಿಂಹನು ಚಿತ್ತೂರಿನ ರಾಜವಂಶದವನು, ಬಾಲ್ಯದಿಂದಲೂ ವಿಕ್ರಮಿಯಾಗಿದ್ದ ಅವನ ಹೃದಯದಲ್ಲಿ ಮಹತ್ವಾಕಾಂಕ್ಷೆ ತುಳುಕುತ್ತಿತ್ತು. ಒಮ್ಮೆ ನಡೆದ ಯುದ್ಧದಲ್ಲಿ ರಾಣನು ಇಚ್ಛಿಸಿದಂತೆ ಸಂಧಿಮಾಡಿಕೊಳ್ಳುವುದನ್ನು ಇವನು ವಿರೋಧಿಸಿದುದರಿಂದ, ರಾಜ್ಯದಿಂದ ಹೊರಗೆ ಹಾಕಲ್ಪಟ್ಟಿದ್ದನು. ಸಾಹಸಿಯಾದ ಅವನು ಅನಂತರ ಅರಾವಳಿಯ ಅಭಯಹಸ್ತದಡಿಯಲ್ಲಿ ತನ್ನ ಸ್ವಂತ ದುರ್ಗವನ್ನು ರಚಿಸಿ ಆಳತೊಡಗಿದ್ದನು.

ಗೌರೀದೇವಿ, ಕೀರ್ತಿಸಿಂಹನ ಏಕಮಾತ್ರ ಪುತ್ರಿ ತನ್ನ ರಾಜ್ಯವನ್ನು ಬಲಪಡಿಸಿ ಒಂದು ದೊಡ್ಡ ಸಾಮ್ರಾಜ್ಯವಾಗಿ ಬೆಳೆಸಬೇಕೆಂದಿದ್ದ ಕೀರ್ತಿಸಿಂಹನ ಮಹತ್ವಾಕಾಂಕ್ಷೆ ಈಡೇರಿರಲಿಲ್ಲ ಹಾಗೆಯೇ ಗಂಡು ಸಂತಾನವಿಲ್ಲದುದರಿಂದ ಅವನ ಮನಸ್ಸಿಗೆ ಇನ್ನೂ ಹೆಚ್ಚಿನ ನೋವಾಗಿತ್ತು. ಅದಕ್ಕಾಗಿಯೇ ಪುತ್ರಿಯಾದ ಗೌರೀಕುಮಾರಿಯನ್ನು ರಾಜಕುಮಾರನಂತೆಯೇ ಬೆಳೆಸಿದ್ದನು. ರಾಜಕುಮಾರಿ ಶಸ್ತ್ರ ವಿದ್ಯೆಯಲ್ಲಿ ಪರಿಣತಳಾಗಿದ್ದಳು

ಆಗ ಢಿಲ್ಲಿಯಲ್ಲಿ ಅಲ್ಲಾವುದ್ದೀನ್ ಖಿಲ್ಜಿ ರಾಜ್ಯವಾಳುತ್ತಿದ್ದನು. ಚಿತ್ತೂರಿನ ಪದ್ಮಿನೀದೇವಿಗಾಗಿ ಅವನು ಮೇವಾಡದ ರಾಣನಾದ ಭೀಮಸಿಂಹನೊಡನೆ ಯುದ್ಧ ಸಾರಿದ್ದನು. ಢಿಲ್ಲಿಯಿಂದ ಖಿಲ್ಜಿಯ ಸೈನ್ಯ ಮೇವಾಡದೆಡೆಗೆ ಸಾಗುತ್ತಿದ್ದಾಗ, ದಾರಿಯಲ್ಲಿದ್ದ ಜ್ವಾಲಾದುರ್ಗದ ಮೇಲೆ ಖಿಲ್ಜಿಯ ಸೇನಾಪತಿಗಳ ಕಣ್ಣು ಬಿದ್ದಿತ್ತು. ಆದರೆ, ಕೀರ್ತಿಸಿಂಹನು ವಿಧವಿರೋಯುರ ಈ ಮೊದಲನೆಯ ಆಘಾತವನ್ನು ಯಶಸ್ವಿಯಾಗಿ ಎದುರಿಸಿದ್ದನು. ಈ ಯುದ್ಧದಿಂದ ಜ್ವಾಲಾದುರ್ಗಕ್ಕಾದ ಹಾನಿಮಾತ್ರ ಅಸಹನೀಯವಾಗಿತ್ತು. ವೀರಶಿರೋಮಣಿಗಳೆಲ್ಲರೂ ವೀರ ಸ್ವರ್ಗವನ್ನು ಸೇರಿದ್ದರು. ಜ್ವಾಲಾದುರ್ಗದ ವೀರಶ್ರೀ ಇಂಗಿಹೋಗಿತ್ತು. ರಾಜನಾದ ಕೀರ್ತಿಸಿಂಹನು ಹಣ್ಣಾಗಿದ್ದನು.

ಸೋತ ಖಿಲ್ಜಿಯ ಸೈನ್ಯ ಯಾವ ಘಳಿಗೆಯಲ್ಲಾದರೂ ಪ್ರತೀಕಾರ ಮಾಡುವುದಕ್ಕಾಗಿ ಇನ್ನೊಂದು ಆಕ್ರಮಣ ಮಾಡದಿರದು. ತನ್ನ ಸ್ವಾತಂತ್ರ್ಯ

ವನ್ನು ಉಳಿಸಿಕೊಳ್ಳುವುದು ಹೇಗೆಂದು ರಾಜನಿಗೆ ಯೋಚನೆ. ಕಾದುವ ವೀರರಿರಲಿಲ್ಲ. ಇದ್ದರೂ, ಅವರನ್ನು ಹುರಿದುಂಬಿಸಿ ಕಾದಿಸುವ ಸೇನಾಪತಿಯಿರಲಿಲ್ಲ. ಬಲವಾದ ಸೈನ್ಯ ಕಟ್ಟಲು ವೃದ್ಧಾಪ್ಯದಲ್ಲಿ ಅವನಿಗೆ ಹೀನ ದೆಸೆಯೊದಗಿತ್ತು

ಗೌರೀದೇವಿಯನ್ನು ಈ ಚಿಂತೆ ಹಗಲಿರುಳು ಕಾಡುತ್ತಿತ್ತು. ಖಿಲ್ಜಿಯೊಡನೆ ಒಪ್ಪಂದ ಮಾಡಿಕೊಂಡರೇನೆಂದು ರಾಜನೊಮ್ಮೆ ಮಗಳೊಡನೆ ಸೂಚಿಸಿದ್ದಾಗ ಹಾಗೆಂದೂ ಆಗಲಾರದೆಂದಿದ್ದಳು. ಜ್ವಾಲಾದುರ್ಗದ ಪ್ರಜೆಗಳಿಗೂ ಯುದ್ಧದಲ್ಲಿ ಆತುರವಿರಲಿಲ್ಲ ಎಲ್ಲವೂ ರಾಜಕುಮಾರಿಯ ಚಿತ್ತವೃತ್ತಿಯನ್ನೇ ಅವಲಂಬಿಸಿತ್ತು. ರಾಜನೂ ಆಕೆಯೆಂದಂತೆ ನಡೆಯುವವನು.

ಅವರು ನಿರೀಕ್ಷಿಸಿದ ಅಶುಭ ಘಳಿಗೆ ಒಂದು ದಿನ ಬಂದೇ ಬಂದಿತು. ರಾಜ್ಯದ ಗಡಿನಾಡಿನಲ್ಲಿದ್ದ ಸೈನಿಕರು ಒಂದು ದಿನ ರಾಜನಲ್ಲಿಗೆ ಬಂದು ಅರುಹಿದರು:

"ಮಹಾ ಪ್ರಭೂ, ಢಿಲ್ಲಿಯ ಸೈನ್ಯ ಸಮೀಪಿಸುತ್ತಿದೆ."

ಮಹಾರಾಜನ ಮುಖಕ್ಕೆ ರಕ್ತವೇರಿತು. ಕಟಕಟನೆ ಹಲ್ಗಡಿದನು. ಅವನ ಬಲಿಷ್ಟವಾದ ಭುಜಗಳು ಸಮರೋತ್ಸಾಹದಿಂದ ಅದುರಿದುವು. ಆದರೆ, ಯೋಚಿಸಿದಂತೆ, ಉತ್ಸಾಹವಿಳಿದು ಕಾತರ ಅವನ ಮನವನ್ನಾವರಿಸಿತು.

"ಸೈನ್ಯ ಎಷ್ಟು ದೂರದಲ್ಲಿದೆ?"

"ನಮ್ಮ ರಾಜ್ಯದ ಗಡಿ ದಾಟಿ ಬೇಟೆಗೆಂದು ಹತ್ತು-ಮೂವತ್ತು ಹರದಾರಿ ದಾಟಿದ್ದೆವು. ಕಾಡಿನ ಮಧ್ಯದಲ್ಲಿ ಆಗ ನೂರು-ನೂರೈವತ್ತು ಮುಸಲ್ಮಾನ ಸೈನಿಕರ ಗುಂಪು ನಮ್ಮ ಮೇಲೆರಗಿತು. ನಾವು ಹತ್ತೈವತ್ತು ಜನರೂ ಇರಲಿಲ್ಲ. ಹಲವರು ಪ್ರಾಣ ನೀಗಿದರು. ನಾವು ಕೆಲವರು ಪಾದಕ್ಕೆ ಅರುಹಲೆಂದು ಜೀವ ಹಿಡಿದುಕೊಂಡು ಬಂದೆವು ಮಹಾಪ್ರಭೂ."

ರಾಜ್ಯದ ಮೂವತ್ತು ಹರದಾರಿಯಲ್ಲಿ ಶತ್ರುಸೈನ್ಯವಿದೆ! ಕೀರ್ತಿಸಿಂಹನು ತನ್ನ ಯುದ್ಧ ಸಿದ್ಧತೆಯನ್ನು ನೆನೆದನು. ಇದು ತನಕ ಯಾವ ಸಿದ್ಧತೆಗಳಾಗಿವೆ?

ಸೈನಿಕರನ್ನು ಕಳುಹಿಸಿ ರಾಜನು ಯೋಚನಾಮಗ್ನನಾದನು. ರಾಜಕುಮಾರಿಗೆ ಕರೆ ಹೋಯಿತು. ಅವಳು ಒಂದು ಚಿಂತಿತನಾಗಿ ಕುಳಿತ

ರಾಜನನ್ನು ನೋಡಿದಳು. ಅವಳೊಡನೆ ರಾಜನು ಸನ್ನಿವೇಶವನ್ನು ವಿವರಿಸಿ, ಹೇಳಿದನು:

"ಕುಮಾರೀ, ಈಗ ಏನು ಮಾಡಬೇಕೆನ್ನುವೆ?"

"ಅಂದರೆ?"

ರಾಜಕುಮಾರಿ ಪ್ರಶ್ನೆ ಅರ್ಥವಾಗದಂತೆ ಕೇಳಿದಳು.

"ನೋಡು, ಇನ್ನೂ ನಮ್ಮಿಂದ ವೀರತನದ ನಟನೆ ಮಾಡುವುದು ಸಾಧ್ಯವೇ? ನಮ್ಮ ಬಳಿಯಲ್ಲಿ ಈಗ ಏನಿದೆ? ಶತ್ರುಗಳ ಬಲ ತಿಳಿದಿಲ್ಲ. ನಮ್ಮಲ್ಲಿ ಒಬ್ಬ ಸೇನಾಪತಿಯೂ ಇಲ್ಲ. ಇದು ತನಕವೂ ನಾವು ಕೇವಲ ಯೋಚನೆಯಲ್ಲೇ ಕಳೆದುದಾಯಿತು. ನಿರೀಕ್ಷಿಸಿದುದಕ್ಕಿಂತಲೂ ಮೊದಲೇ ಆಕ್ರಮಣ ನಡೆಯಿತು...............ಕುಮಾರೀ, ಏನು ಸಂಧಿಯೋ—ಯುದ್ಧವೇ?"

"ಅಪ್ಪಾ, ಸಂಧಿಯು ಮಾತೇಕೆ? ರಜಪೂತ ರಕ್ತದಲ್ಲಿ ವೀರತೆಗೆ ಕೊರತೆಯಾಗುವುದೇ?"

"ಹಾಗೆ ನಾನು ಹೇಳಬಲ್ಲೆನೇ? ನಾನೇ ಕಟ್ಟಿ ಬೆಳೆಸಿದ ಈ ರಾಜ್ಯವನ್ನು ಬೇರೆಯವರಿಗೊಪ್ಪಿಸಲು ನನ್ನ ಮನಸ್ಸು ಒಪ್ಪುವುದೇ? ತಿಳಿದೂ ತಿಳಿದೂ, ಮಕ್ಕಳಂತೆ ಪಾಲಿಸಿದ ಪ್ರಜೆಗಳನ್ನು ಯುದ್ಧ ಕುಂಡದಲ್ಲಿ ಯಾಕೆ ಆಹುತಿ ಕೊಡಬೇಕು? ವಿಜಯದ ಆಸೆ ದುರ್ಲಭ........"

ಹೇಳುತ್ತಾ ಹೇಳುತ್ತಾ ಕೀರ್ತಿಸಿಂಹನಿಗೆ ಬಾಲ್ಯದ ನೆನಪು ಕಾಡಿತು. ಇಂತಹ ಒಂದು ಸಂದರ್ಭದಲ್ಲೇ ಅವನು ತನ್ನ ತಂದೆಯಾದ ರಾಣನಿಗೆ ಎದುರು ನುಡಿದು ವಾದಿಸಿದ್ದನು. ಎಳೆತನದ ಬಿಸಿರಕ್ತ ಉಕ್ಕೇರುವುದು ಸಹಜ. ಈಗ ಅವನ ಕುಮಾರಿ ಅವನಿಗೆ ಮಾರ್ನುಡಿಯುತ್ತಿದ್ದಳು.

"ಆದರೂ ದುರ್ಗದ ಬಾಗಿಲು ತೆರೆದು ನಾನು ವೈರಿಗಳನ್ನು ಸಂಧಿಗೆ ಆಹ್ವಾನಿಸಲಾರೆನಪ್ಪಾ. ಶಕ್ತಿಯಿರುವಷ್ಟು ಹೋರಾಡಿಯೇ......"

ಕೀರ್ತಿಸಿಂಹನಿಗೆ ಪಶ್ಚಾತ್ತಾಪವಾಯಿತು. ಹಿಂದೆ ತನ್ನ ತಂದೆ ಮಾಡಿದ ತಪ್ಪನ್ನೇ ಈಗ ತಾನು ತಂದೆಯಾಗಿ ಮಾಡಬಾರದೆಂದುಕೊಂಡನು. ಆದುದರಿಂದ ನಿರ್ಧಾರವಾಗಿ ನುಡಿದನು:

"ಹಾಗೆಯೇ ಮಾಡೋಣ ಕುಮಾರಿ. ನಮ್ಮ ರಕ್ತದಿಂದ ಅರಾವಳಿಯ ಕಾಲುವೆಗಳನ್ನು ತುಂಬಿ ತುಳುಕಿಸೋಣ. ಕ್ಷತ್ರಿಯ ರಕ್ತ ಎಂದೂ ತಲೆ

ಬಾಗಿಸಲಾರದು.....ಇನ್ನು ಯುದ್ಧ ಸಿದ್ಧತೆಗಳಾಗಲಿ. ಸೈನ್ಯದ ಪ್ರಸರು ಜ್ಜೀವನ......ವೈರಿಗಳೆಡೆಗೆ ಗುಪ್ತಚಾರರನ್ನು ಕಳುಹಿಸಬೇಕು. ರಾಜ್ಯದಲ್ಲಿ ಯುದ್ಧ ನಿಶ್ಚಯದ ಘೋಷಣೆ ಸಾರಲ್ಪಡಲಿ."

ಗೌರೀದೇವಿಯ ಎದೆ ತುಂಬಿ ಬಂತು. ಕೀರ್ತಿಸಿಂಹನ ನಿಶ್ಚಯಕ್ಕೆ ಸರಿಯಾದ ಕಾರಣ ಆಕೆಗೆ ಅರಿಯಲಿಲ್ಲ. ತನ್ನ ಹಠಕ್ಕೆ ತಲೆವಾಗಿ ತಂದೆ ಯುದ್ಧವನ್ನು ನಿಶ್ಚಯಿಸಿದನೆಂದುಕೊಂಡಳು. ತಂದೆಯ ವಾತ್ಸಲ್ಯಕ್ಕಾಗಿ ಅವಳ ಕಣ್ಣುಗಳಲ್ಲಿ ಎರಡು ಬಿಂದು ಅಶ್ರು ಕಾದು ನಿಂತುವು.

೪

ಯುದ್ಧದ ವಾರ್ತೆ ಜ್ವಾಲಾದುರ್ಗದ ವೀರರಲ್ಲಿ ಹೊಸ ಹುರುಪನ್ನು ತುಂಬಿತು. ಎಲ್ಲೆಲ್ಲಿಯೂ ಚೈತನ್ಯ ನಲಿದಾಡಿತು.

ಮರುದಿನ ಪ್ರಾತಃಕಾಲದಲ್ಲಿ ರಾಜಕುಮಾರಿ ಕಾನನ ವಿಹಾರಕ್ಕೆ ಹೊರಟು ನಿಂತಳು. ಇಂದು ಆಕೆ ತರುಣನ ವೇಷ ಧರಿಸಲಿಲ್ಲ. ರಾಜಕುಮಾರಿಯ ಆಡಂಬರದ ಉಡಿಗೆಯೂ ಇರಲಿಲ್ಲ. ಸರಳವೇಷದಲ್ಲಿ ಅವಳನ್ನು ನೋಡಿದ ಚಂಪಾ ಅಚ್ಚರಿಯಿಂದ ಕೇಳಿದಳು:

"ರಾಜಕುಮಾರಿ, ಯುದ್ಧ ಸಿದ್ಧತೆಯ ಈ ಕಾಲದಲ್ಲಿ ವಿಹಾರವೇ?"

"ಹೌದು ಚಂಪಾ—ಯುದ್ಧ ಸಿದ್ಧತೆಗೆಂದೇ ಹೊರಡುತ್ತಿದ್ದೇನೆ."

ಚಂಪೆಗೆ ಅರ್ಥವಾಗಲಿಲ್ಲ. ಕಣ್ಣುಗಳಲ್ಲಿ ವಿಸ್ಮಯ ಸೂಚಿಸಿದಳು. ದನಿಯೆತ್ತಿ ಕೇಳಲು ಧೈರ್ಯವಾಗಲಿಲ್ಲ.

ರಾಜಕುಮಾರಿ ಗಂಭೀರತೆಯಿಂದ ನುಡಿದಳು:

"ಚಂಪಾ, ಇಂದು ನಮ್ಮ ಸೇನಾಪತಿಯನ್ನು ಕರೆದುತರುವೆ."

ರಾಜಕುಮಾರಿ ವೈಹಾಳಿಯಿಂದ ಆ ಕಿಂಶುಕ ವೃಕ್ಷದೆಡೆಗೆ ತೆರಳಿದಳು. ಸೊಂಟದಲ್ಲಿ ಸಿಲುಕಿಸಿದ್ದ ಕೊಳಲನ್ನು ತೆಗೆದು ತುಟಿಗಳಲ್ಲಿಟ್ಟು ಧ್ವನಿಗೈದು ಗಿರಿಶಂಕರನನ್ನು ಕರೆದಳು. ಇಂದ್ರಜಾಲದಂತೆ ಕೊಳಲಿನ ದನಿ ಗಿರಿಶಂಕರನನ್ನು ಕರೆದು ತಂದಿತು. ಇಂದು ರಾಜಕುಮಾರಿ ಸ್ತ್ರೀಯ ಉಡಿಗೆಯಲ್ಲೇ ಬಂದಿದ್ದಳು. ಮುಖದಲ್ಲಿ ಎಂದಿನ ನಸುನಗೆಯಿರಲಿಲ್ಲ. ನೋಡಿ, ಗಿರಿಶಂಕರನಿಗೆ ಅರ್ಥವಾಯಿತು.

"ರಾಜಕುಮಾರೀ, ಏನಪ್ಪಣೆಯಾಗುವುದು?"

"ತರುಣ, ಇಂದು ಜ್ವಾಲಾದುರ್ಗಕ್ಕೆ ವೀರರ ಸೇವೆ ಬೇಕಾಗಿದೆ. ಹೊರಡುವಿಯಾ?"

ರಾಜಕುಮಾರಿ ಪ್ರಶ್ನಿಸಿದಳು.

"ರಾಜಕುಮಾರಿಯ ಆಜ್ಞೆಯನ್ನೇ ಇದುತನಕ ಕಾಯುತ್ತಿದ್ದೆ. ಹೊರಟೇ ಬಂದಿರುವೆನು."

ಎಂದನು ಗಿರಿಶಂಕರ.

"ತರುಣ ಜ್ವಾಲಾದುರ್ಗದ ಸೇನಾಪತಿಯ ಪಟ್ಟ ನಿನಗೆ ಕಾದಿದೆ. ಈ ವಿಷಮ ಪರಿಸ್ಥಿತಿಯಿಂದ ದುರ್ಗವನ್ನು ಕಾಪಾಡುವ ಭಾರ ನಿನ್ನ ಕೈಯಲ್ಲಿದೆ. ಅಲ್ಲದೆ—ಅಲ್ಲದೆ......"

ಗಿರಿಶಂಕರನು ರಾಜಕುಮಾರಿಯ ಮುಖದಲ್ಲಿ ಕಣ್ಣು ನೆಟ್ಟು ಅವಳ ಮುಂದಿನ ಮಾತಿಗಾಗಿ ಕಾದನು. ಅವಳ ಕಣ್ಣುಗಳೇ ಅದನ್ನು ಅವನಿಗೆ ತಿಳಿಸಿದುವು.

"ರಾಜಕುಮಾರಿಯನ್ನು ಕಾಪಾಡುವ ಭಾರವೂ ನಿನ್ನ ಕೈಯಲ್ಲಿದೆ."

"ಈ ಪ್ರಾಣ - ರಾಜಕುಮಾರಿಯ ಸೇವೆಗೆ ಮೀಸಲು. ಈ ದೇಹದಲ್ಲಿ ಉಸಿರಾಡುವ ತನಕ ರಾಜಕುಮಾರಿಯ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವೆ."

ಎಂದು ಗಿರಿಶಂಕರ ರಾಜಕುಮಾರಿಯೆದುರು ಮೊಣಕಾಲೂರಿ ನುಡಿದನು. ರಾಜಕುಮಾರಿ ಬಾಗಿ, ಆತನ ಕೈಹಿಡಿದೆತ್ತಿದಳು.

೫

ಮರುದಿನ ಸುಮುಹೂರ್ತದಲ್ಲಿ ರಾಜಕುಮಾರಿ, ಗಿರಿಶಂಕರನನ್ನು ಸೇನಾಧಿಪತಿಯ ಉಡಿಗೆಗಳಿಂದ ಸಿಂಗರಿಸಿ ಮಹಾರಾಜನೆಡೆಗೆ ಅವನನ್ನು ಕರೆದೊಯ್ದಳು. ಗಿರಿಶಂಕರನು ವಿನಯದಿಂದ ಮಹಾರಾಜನಿಗೆ ವಂದಿಸಿದನು.

ರಾಜಕುಮಾರಿ ನುಡಿದಳು:

"ಅಪ್ಪಾ, ಈತನು ನಮ್ಮ ಹೊಸ ಸೇನಾಪತಿ—ಸೇನಾಪತಿಯ ಕತ್ತಿಯನ್ನು ನೀಡಿ ಸೈನ್ಯಾಭಿಷೇಕ ಮಾಡಿರಿ."

ಕೀರ್ತಿಸಿಂಹನು ಕಣ್ಣು ನೆಟ್ಟು ಹೊಸ ಸೇನಾಪತಿಯನ್ನು ನೋಡಿದನು. ನೋಡಿದಂತೆ ಅವನ ಕುರಿತಾಗಿ ಅಭಿಮಾನ ತುಂಬಿ ಬಂದಿತು.

ಶಿಲಾ ನಿರ್ಮಿತ ವೀರ ಮೂರ್ತಿಯಂತೆ ಗಿರಿಶಂಕರನು ನಿಂತಿದ್ದನು. ವೀರ ತೇಜವು ಅವನ ಮುಖದಿಂದ ಹೊರ ಹೊಮ್ಮುತ್ತಿತ್ತು. ರಾಜನು ಪ್ರಶ್ನಿಸಿದನು:

"ತರುಣವೀರ ನಿನ್ನ ಹೆಸರೇನು?"

"ಗಿರಿಶಂಕರ ಸಿಂಹ."

ತರುಣನು ಉತ್ತರವಿತ್ತನು. ಮಂಗಳ ವಾದ್ಯವಾದ ಶಂಖದಿಂದ ಹೊರಡುವ ದಿವ ಧ್ವನಿಯಂತಿತ್ತು ಆ ಸ್ವರ.

ಕೀರ್ತಿಸಿಂಹನು ಒಂದುಕ್ಷಣ ರಾಜಕುಮಾರಿಯನ್ನು ದಿಟ್ಟಿಸಿದನು. ಬಳಿಕ ಮರು ಮಾತಾಡದೆ, ವಿಧಿಯಂತೆ ಗಿರಿಶಂಕರಸಿಂಗನಿಗೆ ಸೇನಾಪತ್ಯ ಭಿಷೇಕ ನಡೆಸಿದನು.

ಜ್ವಾಲಾದುರ್ಗದ ಸೈನ್ಯ ಹತ್ತು ಸಾವಿರ ಯೋಧರಿಂದ ಕೂಡಿತ್ತು. ಗುಪ್ತಚಾರರು ವರದಿತಂದಂತೆ ಶತ್ರು ಸೈನ್ಯ ಎಪ್ಪತ್ತೈದು ಸಾವಿರದಷ್ಟಿತ್ತು. ಅಷ್ಟು ದೊಡ್ಡ ಸೈನ್ಯದೊಡನೆ ಕಾದಿ ಜ್ವಾಲಾದುರ್ಗದ-ರಾಜಕುಮಾರಿಯ ಮಾನವನ್ನು ರಕ್ಷಿಸುವ ಹೊಣೆ ಗಿರಿಶಂಕರನದಿತ್ತು. ಅವನು ಅಳುಕದೆ ಕಾರ್ಯಸನ್ನದ್ಧನಾದನು. ಶುಭ ಮುಹೂರ್ತದಲ್ಲಿ ಜ್ವಾಲಾದುರ್ಗದಿಂದ ಸೈನ್ಯದ ವಿಜಯಯಾತ್ರೆ ಹೊರಟಿತು. ಗಿರಿಶಂಕರನ ಧೈರ್ಯವೀರ್ಯಗಳು ಸೈನಿಕರಲ್ಲಿ ನವಚೇತನವನ್ನು ತುಂಬಿದುವು. ಪ್ರಾಣದ ಹಂಗು ತೊರೆದು ಕಾದಲು ಎಲ್ಲರೂ ಪಣತೊಟ್ಟರು.

ರಾಜಕುಮಾರಿಯೂ ಗಂಡುಡುಗೆಯುಟ್ಟು ಗಿರಿಶಂಕರನನ್ನು ಹಿಂಬಾಲಿಸಿದಳು ಆಗ ಅವನು ಕೇಳಿದನು;

"ರಾಜಕುಮಾರಿ, ನೀವು ಯಾಕೆ ಬರಬೇಕು? ತಮ್ಮ ಅನುಚರರಲ್ಲಿ ನಿಮಗೆ ವಿಶ್ವಾಸವಿಲ್ಲವೇ?"

"ಆ ಮಾತಲ್ಲ— ಗಿರಿಶಂಕರ; ನಮಗೆ ರಣಭೂಮಿ ಅಪರಿಚಿತವಲ್ಲ."

ಜ್ವಾಲಾದುರ್ಗದ ಸೈನ್ಯ ಉತ್ತರದ ದಿಣ್ಣೆಯೊಂದರಲ್ಲಿ ಶಿಬಿರ ಹೂಡಿತು. ಆ ವಾರ್ತೆ ಢಿಲ್ಲಿಯ ಸೈನ್ಯಕ್ಕೆ ದೊರೆತುದೇ ತಡ; ದುರ್ಗದ ಕಡೆಯಾಗಿ ನಡೆಯುತ್ತಿದ್ದ ಆ ಸೈನ್ಯ ಈ ಕಡೆಗೆ ತಿರುಗಿತು. ಎರಡು ಸೇನೆಗಳಲ್ಲೂ ತುಮುಲ ಸಂಗ್ರಾಮ ನಡೆಯಿತು. ಪ್ರಥಮ ದಿನದ ಯುದ್ಧದಲ್ಲೇ ಜ್ವಾಲಾ ದುರ್ಗದ ಆರುಸಾವಿರ ಮಂದಿ ಮಡಿದು ಬಿದ್ದರು. ಢಿಲ್ಲಿಯ ಸೈನ್ಯವೂ

ಅರ್ಧದಷ್ಟು ನುಚ್ಚುನೂರಾಗಿತ್ತು. ಎರಡೂ ಕಡೆಯವರೂ ಶೌರ್ಯದಿಂದ ಹೋರಾಡಿದ್ದರು.

ಒಂದನೇ ದಿನದ ಯುದ್ಧವೇ ರಾಜಕುಮಾರಿಯಲ್ಲಿ ನಿರಾಶೆಯನ್ನು ಬಿತ್ತಿತು. ಇನ್ನುಳಿದ ನಾಲ್ಕು ಸಾವಿರ ಸೈನಿಕರು ಥಿಲ್ಲಿಯ ನಲುವತ್ತು ಸಾವಿರ ಯೋಧರೊಡನೆ ಕಾದಿ ಗೆಲ್ಲುವುದುಂಟೇ? ನಿರಾಶೆ ಕಾಡಿದ್ದರೂ ಅವಳ ಕೆಚ್ಚು ಇಳಿದಿರಲಿಲ್ಲ.

ರಾಜಕುಮಾರಿ ಸೇನಾಪತಿಯ ಶಿಬಿರವನ್ನು ಪ್ರವೇಶಿಸಿದಾಗ ರಾತ್ರಿ ಒಂದನೇ ಜಾವ ಕಳೆದಿತ್ತು. ಆಗಲೇ ಯುದ್ಧದಿಂದ ಬಳಲಿದ ಸೈನಿಕರು ನಿದ್ದೆ ಹೋಗಿದ್ದರು. ಅಂದಿನ ಯುದ್ಧದಿಂದಾದ ಗಾಯಕ್ಕೆ ಗಿರಿಶಂಕರನು ಕುಳಿತು ಮದ್ದನ್ನು ಹಚ್ಚುತ್ತಿದ್ದನು ರಾಜಕುಮಾರಿ ಬಂದುದನ್ನು ತಿಳಿದು ಗೌರವದಿಂದ ಎದ್ದು ನಿಂತನು.

“ಗಿರಿಶಂಕರ, ಇನ್ನುಳಿದ ಸೈನ್ಯ ಕೇವಲ ನಾಲ್ಕು ಸಾವಿರ.”

ಎಂದಳು ರಾಜಕುಮಾರಿ.

“ರಾಜಕುಮಾರಿ ನಿರಾಶರಾಗಬಾರದು ನಾಳೆಯ ಯುದ್ಧದಲ್ಲಿ ಗೆಲವು ನಮ್ಮದಾಗುವುದು. ನಮ್ಮ ಸೈನಿಕರು ಒಬ್ಬೊಬ್ಬರೂ ಧೈರ್ಯದ ವೀರ ಕಂಬಗಳು”

ಎಂದನು ಸೇನಾಪತಿ. ಅವನ ಮಾತು ರಾಜಕುಮಾರಿಯ ಮನದಲ್ಲಿ ಪುನಃ ಆಸೆಯ ಕಿಡಿಯನ್ನು ಉರಿಸಿತು.

ಮರುದಿನ ಸೈನ್ಯವನ್ನು ವ್ಯೂಹವಾಗಿ ನಿಲ್ಲಿಸಿ ಅದರ ಎಡಭಾಗದಲ್ಲಿ ರಾಜಕುಮಾರಿಯೂ ಬಲಭಾಗದಲ್ಲಿ ಗಿರಿಶಂಕರನೂ ನಿಂತು ಕಾದಿದರು. ಮಧ್ಯಾಹ್ನದೊಳಗೆ ಜ್ವಾಲಾದುರ್ಗದ ಸೈನ್ಯ ತುಂಬಾ ಕ್ಷೀಣಿಸಿ ಹೋಯಿತು. ಎಡಭಾಗದ ಸೈನ್ಯವು, ಥಿಲ್ಲಿಯ ಸೈನ್ಯದ ಆಘಾತಕ್ಕೆ ತತ್ತರಿಸಿ ಕುಸಿಯಿತು. ಯುದ್ಧ ಮಾಡುತ್ತಾ ಗಿರಿಶಂಕರನು ನೋಡಿದನು: ಸೈನ್ಯದ ಎಡಭಾಗ ಕುಸಿದು ಕೋಲಾಹಲ ಉಂಟಾಗಿತ್ತು.' ಅವನೆದೆ ಯಾವುದೋ ಅನಿರೀಕ್ಷಿತ ಆಘಾತದಿಂದ ಮಿಡಿಯಿತು. ಅಲ್ಲಿನ ಸೈನಿಕರು ಓಡತೊಡಗಿದ್ದರು. ಗಿರಿಶಂಕರನು ತನ್ನ ಕುದುರೆಯನ್ನು ಅಲ್ಲಿಗೆ ತಿರುಗಿಸಿ ಕೂಗಿಕೊಂಡನು:

“ವೀರರೇ, ಹೇಡಿಗಳಾಗಿ ಎಲ್ಲಿಗೆ ಓಡುವಿರಿ? ಓಡುವ ದಾರಿ ವೈರಿ ಸೈನ್ಯದಿಂದ ಆಕ್ರಮಿತವಾಗಿದೆ— ಮುನ್ನುಗ್ಗಿ ಹೋರಾಡಿರಿ......”

ಆಷಾಢದ ಗುಡುಗಿನಂತೆ ಅವನ ಆಜ್ಞೆ ಗುಡುಗಿತು. ಓಡುವ ವೀರರು ಬೆನ್ನು ತಿರುಗಿಸಿದರು. ಜ್ವಾಲಾದುರ್ಗದ ಸೈನ್ಯ ಇನ್ನೊಮ್ಮೆ ವೀರಾವೇಶ ದಿಂದ ಕಾದಾಡತೊಡಗಿತು.

ಗಿರಿಶಂಕರನ ಕತ್ತಿ ಮಿಂಚನಂತೆ ಸುಳಿದು ಅರಿಶಿರಗಳನ್ನು ತರಿಯುತ್ತಿತ್ತು. ಸಮರಲೀಲೆಯಲ್ಲೇ ಅವನು ಮಗ್ನನಾಗಿದ್ದಾಗ ಬಳಿಯಲ್ಲೇ ಯಾರೋ ಅವನ ಹೆಸರನ್ನು ಕೂಗಿದುದು ಕೇಳಿತು. ಗಾಬರಿಯಿಂದ ನೋಡಿದಾಗ—ರಾಜಕುಮಾರಿ! ಅವಳೆದೆಗೆ ಬಾಣನಾಟಿತ್ತು. ನೆತ್ತರು ಕಾರಂಜಿಯಾಗಿ ಚಿಮ್ಮುತ್ತಿತ್ತು. ರಣಕಾಳಿಯ ಅವತಾರದಂತೆ ಅವಳು ತೋರಿ ಬರುತ್ತಿದ್ದಳು.

ರಾಜಕುಮಾರಿಯ ದುರ್ದಶೆ ಗಿರಿ ಶಂಕರನಿಗೆ ಕಣ್ಣು ಕತ್ತಲೆ ಬರಿಸಿತು. ಅವನ ಮನಸ್ಸಿಗೆ ಘೋರಾಂಧಕಾರ ಕವಿದಂತಾಯಿತು. ರಾಜಕುಮಾರಿ ಕುದುರೆಯಿಂದ ಬಸವಳಿದು ನೆಲಕ್ಕೆ ಉರುಳಿದಳು. ಅವಳ ಉಸಿರು ಕೊನೆಯದಾಗಿ ನುಡಿಯಿತು.

"ಗಿರಿ....ಶಂ...ಕರ...."

ಆಯಿತು; ಅವನ ಚೈತನ್ಯ ಅನಂತರದಲ್ಲಿ ಅಡಗಿತು. ಜ್ವಾಲಾದುರ್ಗದ ಭವಿಷ್ಯತ್ತಿಗೆ ಅಂಧಕಾರ ಕವಿಯಿತು. ಗಿರಿಶಂಕರನ ದುಃಖಾಗ್ನಿ ಲಾವಾರಸದಂತೆ ಕುದಿದೆದ್ದಿತು. ಕ್ರೋಧಾಂಧನಾದ ಅವನ ಖಡ್ಗವು ಕಾರ್ಗಾಲದ ಮಿಂಚಿನಂತೆ ಹೊಳೆಯತೊಡಗಿತು.

ರಾಜಕುಮಾರಿ ಬಿದ್ದುದನ್ನು ನೋಡಿ ಅಳಿದುಳಿದ ಜ್ವಾಲಾದುರ್ಗದ ಸೈನಿಕರ ಜಂಘಾಬಲ ಉಡುಗಿತು. ಅವರು ಮತ್ತೊಮ್ಮೆ ಕಾಲು ಕಿತ್ತರು. ಸೇನಾಪತಿ ಗಿರಿಶಂಕರನು ಗುಡುಗಿದನು:

"ವೀರರೇ, ಎಲ್ಲಿಗೆ ಓಡುವಿರಿ? ಮುನ್ನುಗ್ಗಿರಿ....ನಿಮ್ಮ ರಾಜಕುಮಾರಿಗಾಗಿ ಜೀವಕೊಡಿರಿ...."

ಜ್ವಾಲಾದುರ್ಗದವರಿಗೆ ಇನ್ನು ವಿಜಯದ ಆಸೆ ಇರಲಿಲ್ಲ.

ಹಿಂದೆ ಮುಂದೆ ನೋಡದೆ, ಮುನ್ನುಗ್ಗುತ್ತಿದ್ದ ಗಿರಿಶಂಕರನು ಶತ್ರುಸೈನ್ಯದ ಮಧ್ಯಭಾಗಕ್ಕೆ ಬಂದಿದ್ದನು. ಥಿಲ್ಲಿಯ ಸೈನ್ಯ ಸುತ್ತಲೂ ಆಕ್ರಮಿಸಿತ್ತು. ವೈರಿಬಾಣಗಳು ಅವನ ಪಕ್ಕಗಳಿಗೆ ನಾಟದುವು ಬೆನ್ನಿಗೆ

ಖಡ್ಗದ ಪ್ರಹಾರ ತಾಗಿತು. . . . ಕೊನೆಗೊಮ್ಮೆ ಅವಶ್ಯವಾಗಿ ಅವನು ನೆತ್ತರಿನ ಓಕುಳಿಯಲ್ಲಿ ಕೆಡೆದನು. ಅವನ ಉಸಿರು ಹೊರಟು ಹೋಯಿತು—

"ಹಾಯ್. . . . ರಾಜಕುಮಾರಿ. . . . . ."

ಅನಂತರ ಜ್ವಾಲಾದುರ್ಗ ವೈರಿ ವಶವಾಯಿತು.

೬

ಅನಂತರ ಕೆಲವು ಮಾಸಗಳು ಕಳೆದು ಹೋದುವು. ಮಳೆಗಾಲ ದಾಟಿ, ವಸಂತವು ಕಾಲಿರಿಸಿತು. ಕಾನನ ವೃಕ್ಷಗಳು ಮರಳಿಯೊಮ್ಮೆ ಹೊಸತಾಗಿ ಚಿಗುರತೊಡಗಿದ್ದುವು, ಪಿಕಶುಕಗಳ ಕಂಠಕ್ಕೆ ಸ್ವರವೇರ ತೊಡಗಿತ್ತು.

ಜ್ವಾಲಾದುರ್ಗದ ಸ್ವಾತಂತ್ರ್ಯದ ಐಸಿರಿ ಅಸ್ತಂಗತವಾದ ತರುವಾಯ ಅಲ್ಲಿ ಮುಸಲ್ಮಾನೀ ಸೇನಾಪತಿಯೊಬ್ಬ ನೆಲಸಿದ್ದನು. ಅವನೇ ಬಾದಶಹನ ಪರವಾಗಿ ರಾಜ್ಯವನ್ನಾಳುತ್ತಿದ್ದನು.

ಯುದ್ಧದಲ್ಲಿ ರಾಜಕುಮಾರಿ ಅಸುತೊರೆದಲ್ಲಿ ಚಂಪಾ, ತನ್ನ ಕೆಲವು ಸಂಗಾತಿಗಳೊಡನೆ ಕಲ್ಲಿನಿಂದ ಸಮಾಧಿ ರಚಿಸುತ್ತಿದ್ದಳು. ಅವಳೀಗ ರಾಜಕುಮಾರಿಯ ಸಖಿಯಲ್ಲ; ಇನ್ನೆಲ್ಲಿ ರಾಜಕುಮಾರಿ ? ಆದರೂ ರಾಜಕುಮಾರಿಯ ನೆನಪು ಅವಳನ್ನೂ ಕಾಡುತ್ತದೆ.

ಚಂಪಾ ಈಗ ರಜಪೂತ ತರುಣನೊಬ್ಬನನ್ನು ವರಿಸಿ ಗೃಹಿಣಿಯಾಗಿದ್ದಳು. ಕೃಷಿಯಿಂದ, ಬೇಟೆಯಿಂದ, ಆ ಕುಟುಂಬವು ಜೀವಿಸುತ್ತಿತ್ತು.

ಚಂಪಾ ರಾಜಕುಮಾರಿಗಾಗಿ ರಚಿಸುವ ಸಮಾಧಿಯು ಅಸ್ತಿವಾರ ರಚಿತವಾಗಿತ್ತು. ಈಗ, ಅವರು ಆ ಸಮಾಧಿಯು ಬಲ ಬದಿಯಲ್ಲಿ ನೆಲ ಅಗೆದು ಕಲ್ಲು ನೆಡುತ್ತಿದ್ದರು.

ಅಂತಹ ಒಂದು ದಿನದಲ್ಲಿ ಒಬ್ಬ ತರುಣ ಸನ್ಯಾಸಿ ಆ ಕಡೆಗಾಗಿ ಅಲೆದಾಡುತ್ತಾ ಬಂದನು. ಗಡ್ಡ, ಜಡೆಗಳು ಅವನ ತಲೆ–ಮುಖಗಳನ್ನು ಆವರಿಸಿದ್ದುವು. ಅವುಗಳೆಡೆಯಲ್ಲಿ ಜೋಡು ನಕ್ಷತ್ರಗಳಂತೆ ಅವನ ಕಣ್ಣುಗಳೆರಡು ಹೊಳೆಯುತ್ತಿದ್ದುವು. ಆದರೆ ಅವನಮುಖದಲ್ಲಿ ಕಾಂತಿಯಿರಲಿಲ್ಲ. ಗ್ರೀಷ್ಮ ಕಾಲದ ಕಾನನದಂತೆ ಅದು ಶೋಭಾ ಹೀನವಾಗಿತ್ತು.

ಸನ್ಯಾಸಿಯು ಸ್ವಲ್ಪ ಹೊತ್ತು ಚಂಪಾ ತನ್ನವರೊಂದಿಗೆ ರಚಿಸುತ್ತಿದ್ದ ಸಮಾಧಿಯನ್ನು ನೋಡಿದನು. ಅನಂತರ ಮೆಲ್ಲ ಮೆಲ್ಲನೆ ಚಂಪೆಯ ಬಳಿಗೈದಿ ಕೇಳಿದನು:

"ಸೋದರಿ, ಇಲ್ಲೇನು ಮಾಡುತ್ತಿರುವಿರಿ?"

ಪ್ರಶ್ನೆಯಿಂದ ಚಕಿತಳಾಗಿ ಚಂಪಾ ತಲೆಯೆತ್ತಿದಳು. ಸನ್ಯಾಸಿಯನ್ನು ನೋಡಿ ಆದರದಿಂದ ವಂದಿಸಿ ನುಡಿದಳು:

"ಆಶೀರ್ವದಿಸಿರಿ ಭಗವಾನ್, ಇಲ್ಲಿ ನಮ್ಮ ರಾಜಕುಮಾರಿ ಗೌರೀದೇವಿಯ ನೆನಪಿಗಾಗಿ ಸಮಾಧಿ ರಚಿಸುತ್ತಿರುವೆವು. ಇಲ್ಲಿ ಆಕೆ ಯುದ್ಧ ಮಾಡುತ್ತಾ ವೀರಸ್ವರ್ಗವನ್ನು ಪಡೆದಳು.

ಸನ್ಯಾಸಿ ಚಂಪೆಯ ಮಾತನ್ನು ಕೇಳುತ್ತಾ ಒಂದು ಕ್ಷಣ ಕಣ್ಣು ಮುಚ್ಚಿದನು. ಬಳಿಕ, ಅವರು ಕಲ್ಲು ನೆಡುತ್ತಿದ್ದ ಇನ್ನೊಂದು ಸ್ಥಳವನ್ನು ತೋರಿಸಿ ಕೇಳಿದನು:

"ಅಲ್ಲಿ?"

"ಅಲ್ಲಿ—ರಾಜಕುಮಾರಿಯ ಪ್ರಿಯ ಸೇನಾಪತಿ ಗಿರಿಶಂಕರನು ಧರಾಶಾಯಿಯಾದ ಸ್ಥಳ; ಅವನಿಗಾಗಿ ಅಲ್ಲಿ ಸಮಾಧಿ......"

ಸನ್ಯಾಸಿ ಒಂದು ಕ್ಷಣ ತಡೆದನು. ಚಂಪಾ ಭಕ್ತಿ ಆದರಗಳಿಂದ ಅವನೆಡೆಗೇ ನೋಡುತ್ತಿದ್ದಳು. ಒಂದು ಕ್ಷೀಣ ಹಾಸ್ಯವು ಅವನ ಸ್ಮಶ್ರು ಚ್ಛಾದಿತ ಓಷ್ಠಗೆಡೆಯಿಂದ ನುಸುಳಿದಂತೆ ಅವಳಿಗೆ ತೋರಿತು; ಆದರೆ, ನಷ್ಟವಾಗಲಿಲ್ಲ.

ಅನಂತರ ಗಂಭೀರವಾಗಿ ಸನ್ಯಾಸಿ ನುಡಿದನು:

"ಅಲ್ಲಿ—ಇಲ್ಲಿ; ಎರಡು ಸಮಾಧಿಗಳೇಕೆ? ಬೇಡ; ಈ ಸ್ಥಳದಲ್ಲಿ ಒಂದು ಚಿಕ್ಕ ಮಂದಿರವನ್ನು ರಚಿಸಿರಿ. ಅದು ಅವರಿಬ್ಬರ ಸ್ಮಾರಕವಾಗಿ. ಅದನ್ನು 'ಗೌರೀ-ಶಂಕರ' ಎಂದು ಕರೆಯಿರಿ. ಅವರಿಬ್ಬರ ಆತ್ಮಗಳಿಗೂ ತೃಪ್ತಿಯಾಗುವುದು."

—ಇಷ್ಟು ನುಡಿದು ಸನ್ಯಾಸಿ ದ್ರುತಗತಿಯಿಂದ ನಡೆದುಬಿಟ್ಟನು. ಚಂಪೆಯ ಅಚ್ಚರಿಯ ದಿಟ್ಟಿಗಳು ಅವನನ್ನು ಹಿಂಬಾಲಿಸಿದುವು.

ಚಂಪಾ ಯೋಚಿಸಿದಳು: "ಯಾರು ಈ ಸನ್ಯಾಸಿ? ಈ ಮುಖವನ್ನು ಹಿಂದೆ ಎಲ್ಲಿಯೋ ನೋಡಿದುದಿದೆ."

ಗಿರಿಶಂಕರನ ಸಮಾಧಿಗಾಗಿ ಕಲ್ಲು ನೆಡುತ್ತಿದ್ದ ಅವಳ ಪತಿ ಕೂಗಿ ಹೇಳಿದನು:

"ಚಂಪಾ, ಆ ಸನ್ಯಾಸಿ ಯಾರು ಗೊತ್ತೇ?"

"ಇಲ್ಲವಲ್ಲಾ—"

ಎಂದಳು ಚಂಪಾ. ಆದರೂ ಅವಳ ಮನಸ್ಸು ಚುಚ್ಚುತ್ತಿತ್ತು: ಆ ಮುಖ, ಗಿರಿಶಂಕರನದಲ್ಲವೇ?......ಹೌದೇ?– ಅವನು ಯುದ್ಧದಲ್ಲಿ ಮಡಿಯಲಿಲ್ಲವೇ?– ಯಾರಿಗೆ ಗೊತ್ತು? ಅವನು ಬದುಕಿದ್ದರೆ ಜ್ವಾಲಾ ದುರ್ಗಕ್ಕೆ ಈ ದುರ್ದೆಶೆ ಏಕೆ ಬರುತ್ತಿತ್ತು?......ಅವನು ಬದುಕಿದ್ದರೆ ಇನ್ನಾದರೂ ಜ್ವಾಲಾದುರ್ಗ ತನ್ನ ಸ್ವಾತಂತ್ರ್ಯ ಪಡೆದು ಮೆರೆದೀತು......

ಚಂಪೆಯ ಮನಸ್ಸಿನಲ್ಲಿ ಆಸೆಯು ಕಿಡಿಯಿತ್ತು; ಆದರೆ, ಆ ಸನ್ಯಾಸಿಯ ವಾರ್ತೆ ಅನಂತರ ಎಲ್ಲೂ ಕೇಳಲಿಲ್ಲ.

೭

ಅರಾವಳಿಯ ಬೆಟ್ಟಗಳ ಸಾನುಭೂಮಿಯಲ್ಲಿ ಆ ಮಂದಿರ ರಚಿತ ವಾಯಿತು. ಸನ್ಯಾಸಿಯ ಮಾತಿನಂತೆ ಚಂಪಾ ಅದಕ್ಕೆ 'ಗೌರೀ—ಶಂಕರ' ಎಂದು ಹೆಸರಿಟ್ಟಳು. ಆಕೆ ಬದುಕಿರುವ ತನಕ ಸಂಧ್ಯಾಕಾಲದಲ್ಲಿ ಅಲ್ಲಿ ಹಣತೆ ಉರಿಸಿಡುತ್ತಿದ್ದಳು.

ಅನಂತರ ಅವಳ ಅಪ್ಪಣೆಯಂತೆ ಅವಳ ಸಂತಾನವೂ ಆ ಕಟ್ಟಳೆ ಪಾಲಿಸಿಕೊಂಡು ಬರುತ್ತಿತ್ತು. ಆದರೆ ಕೊನೆಗೆ, ಎಂದೋ ಒಂದು ದಿನ, ಕಾಲನು ತನ್ನ ಅಗಾಧವಾದ ಗರ್ಭದಲ್ಲಿ ಆ ಮಂದಿರವನ್ನು ಅಡಗಿಸಿ ಬಿಟ್ಟನು.

ಈಗ ಗೌರೀದೇವಿ ಮತ್ತು ಅವಳ ಪ್ರಿಯ ಸೇನಾಪತಿ ಗಿರಿಶಂಕರನ ನೆನಪು ಜಗತ್ತಿನಲ್ಲಿ ಮಾಸಿಹೋಗಿದೆ.



# ಬಲೆ ಬಿಗಿಯಿತು

## ೧

ಮಧ್ಯಾಹ್ನ ಕಳೆಯಿತು; ನೆತ್ತಿಯ ಮೇಲಿದ್ದ ಸೂರ್ಯನು ಪಡುದಿಕ್ಕಿಗೆ ಇಳಿಯ ತೊಡಗಿದನು. ಚೆನ್ನಿ ಇನ್ನೂ ಕಾಯುತ್ತಿದ್ದಳು. ಹೊತ್ತಾರೆ ಹೊರಟಿದ್ದ ಎಲ್ಲರ ದೋಣಿಗಳೂ ಮೀನು ತುಂಬಿಕೊಂಡು ಹಿಂದಿರುಗಿದುವು. ಆದರೂ ಚೆನ್ನಿಯ ತಂದೆ ಅಪ್ಪುವಿನ ದೋಣಿ ಹಿಂದಿರುಗಲಿಲ್ಲ.

ಸಮುದ್ರದ ದಂಡೆಯಲ್ಲಿ ಉದ್ದಕ್ಕೂ ಬಿಳುಪಾದ ಸಕ್ಕರೆಯಂತಹ ಮರಳು ಚಾಚಿತ್ತು. ಆ ಮರಳುಗಾಡಿನಲ್ಲಿ ಅಲ್ಲಲ್ಲಿ ತೆಂಗಿನ ತೋಟ, ಚಬುಕಿನ ತೋಟಗಳಿವೆ. ಚೆನ್ನಿ ಒಂದು ಚಬುಕಿನ ಮರದಡಿಯಲ್ಲಿ ನಿಂತು ಸಾಗರವನ್ನೇ ದಿಟ್ಟಿಸುತ್ತಿದ್ದಾಳೆ. ಅವಳ ಒಳಿಯಲ್ಲಿ ಹಲವು ಬುಟ್ಟಿಗಳಿವೆ.

ಹಿಂಬದಿಯಿಂದ ಕೆಮ್ಮಿದ ಸದ್ದು ಕೇಳಿಸಿತು. ಕಾಯುವುದರಲ್ಲಿ ಪ್ರಪಂಚವನ್ನೇ ಮರೆತಿದ್ದ ಚೆನ್ನಿ ಹೆಜ್ಜೆ ಹಿಂದಿರುಗಿದಳು. ಅಲ್ಲಿ ಕಾದರ್ ನಿಂತಿದ್ದಾನೆ. ನಸುನಗುವೊಂದು ಅವಳ ತುಟಿಗಳಲ್ಲಿ ನುಸುಳಿತು.

"ಯಾರಿಗಾಗಿ ಕಾಯುತ್ತಿರುವೆ ಚೆನ್ನಿ? ಅಪ್ಪನ ದೋಣಿ ಬರಲಿಲ್ಲವೇ?" ಕಾದರ್ ಕೇಳಿದನು.

ಚೆನ್ನಿ 'ಹೂಂ' ಎಂದು ಮರಳಿ ಸಮುದ್ರವನ್ನೇ ದಿಟ್ಟಿಸತೊಡಗಿದಳು. ಕಾದರನ 'ಯಾರಿಗಾಗಿ ಕಾಯುತ್ತಿರುವೆ?' ಎಂಬ ಪ್ರಶ್ನೆ ಅವಳಿಗೆ ರುಚಿಸಲಿಲ್ಲ.

"ಏನು – ಚಿಂತೆಯೇ? ಅಪ್ಪು ಈಗ ದೋಣಿ ತುಂಬಿಕೊಂಡು ಬರಬಹುದು. ಅಷ್ಟೊಂದು ಯಾಕೆ ನೋಡುತ್ತೀ?"

ಚೆನ್ನಿ ಈಗಲೂ ಉತ್ತರಿಸಲಿಲ್ಲ. ತಿರುಗಿ ಕಾದರ್‌ನನ್ನು ದಿಟ್ಟಿಸಿದಳು. ಅವಳ ಕಣ್ಣುಗಳು, 'ನೀನೇಕೆ ಇಲ್ಲಿ?' ಎಂದು ಪ್ರಶ್ನಿಸಿದುವು.

ಚೆನ್ನಿ ಅಪ್ಪುವಿನ ಒಬ್ಬಳೇ ಮಗಳು. ಕಾದರ್ ಅದೇ ಊರಿನವನು. ಅಪ್ಪು ಬೆಸ್ತನು. ಕಾದರ್ ಮಾಪಿಳ್ಳೆ. ಆದರೂ ಅವರ ಸ್ನೇಹ ಬಹಳ ಆಳವಾದದ್ದು. ಅಪ್ಪು ಹಿಡಿದ ಮೀನನ್ನು ಮಾರಬೇಕಾದರೆ, ಕಾದರ್ ಬೇಕು. ಅಪ್ಪು ಬೆಳೆಸಿದ ಹೊಗೆಸೊಪ್ಪನ್ನು ಕೊಳ್ಳುವವನೂ ಕಾದರನೇ.

ಅವನು ಅಪ್ಪುವಿಗೆ ಚಿರ ಪರಿಚಿತ. ಹಾಗೆಯೇ ಚೆನ್ನಿಗೂ. ಅವರಿಬ್ಬರೂ ಸಣ್ಣಪ್ರಾಯದಲ್ಲಿಯೇ ಗೆಳೆಯರು. ಹಳ್ಳಿಯ ಶಾಲೆಗೆ ಕಾದರ್ ಚಿಕ್ಕಂದಿನಲ್ಲಿ ಚೆನ್ನಿಯನ್ನು ಕೈಹಿಡಿದು ಕರೆದುಕೊಂಡು ಹೋದವನು.

"ಚೆನ್ನಿ ಮಂಗಳೂರಿಗೆ ನಾಲ್ಕು ಖಂಡಿ ಮೀನಿನ 'ಕಂಟ್ರಾಕ್ಟ್' ಹಿಡಿದು ಕೊಂಡು ಬಂದಿದ್ದೇನೆ. ನಿನ್ನ ಅಪ್ಪನೊಡನೂ ಹೇಳಿ ಹೋಗೋಣವೆಂದು ಬಂದೆ." ಎಂದು ಹೇಳಿದನು ಕಾದರ್.

ಚೆನ್ನಿಗೆ ಕಾದರನ ಬಗ್ಗೆ ಇದ್ದ ಹೆಮ್ಮೆ ಅಧಿಕವಾಯಿತು. ಕಾದರ್ ಈಗ ವ್ಯಾಪಾರದಂಧೆಗಳಲ್ಲಿ ಜಯಗಳಿಸುತ್ತಿರುವ ವಾರ್ತೆ ಅವಳಿಗೆ ಪ್ರಿಯ ವಾದುದು.

"ಈ ಕಂಟ್ರಾಕ್ಟಿನಲ್ಲಿ ಸಾಧಾರಣ ನೂರಿನ್ನೂರು ಲಾಭ ಬರಬಹುದು." ಪುನಃ ಕಾದರನೇ ಹೇಳಿದನು. ಆದರೂ ಚೆನ್ನಿ ತುಟಿತೆರೆಯಲಿಲ್ಲ.

"ಯಾಕೆ ಚೆನ್ನಿ, ಮಾತಾಡುವುದಿಲ್ಲ?"

ಚೆನ್ನಿಗೆ ಮಾತಾಡಲು ಸಂಕೋಚ. ಎಷ್ಟು ಗೆಳೆಯರಾದರೂ, ಕಾದರ್ ನೊಡನೆ ಏಕಾಂತದಲ್ಲಿ ಮಾತಾಡಲು ಅವಳಿಗೆ ಅಳುಕು. ಕೊನೆಗೆ ಅಳೆದು ಸುರಿದು ಹೇಳಿದರು

"ಏನಿಲ್ಲ—ಅಪ್ಪ ಬರಲಿ. ಏನು ಮಾತಾಡುವುದು—ವ್ಯಾಪಾರದ ವಿಚಾರ ತಾನೇ?"

ಚೆನ್ನಿಯ ಮಾತು ಕಾದರನಿಗೆ ಅರ್ಥವಾಯಿತೋ ಇಲ್ಲವೋ! ಅವನು ಸುಮ್ಮನಾದನು. ಸ್ವಲ್ಪ ಸಮಯ ಕಳೆಯಿತು. ದಿಗಂತದಲ್ಲಿ ಕಪ್ಪು ಚುಕ್ಕೆ ಗಳು ತೋರಿದುವು. ಚೆನ್ನಿ ಗೆಲವಿನಿಂದ ನುಡಿದಳು:

"ಅದೋ, ಅಪ್ಪನ ದೋಣಿ ಕಾಣುತ್ತಿದೆ?"

ದೋಣಿ ನಿಧಾನವಾಗಿ ಹತ್ತಿರ ಹತ್ತಿರ ಬಂತು. ಸಂಜೆಯಾದುದರಿಂದ ತೆರೆಗಳ ಆರ್ಭಟ ಕಡಮೆಯಾಗುತ್ತಾ ಬರುತ್ತಿತ್ತು. ಹತ್ತಿರದಲ್ಲಿ ದೋಣಿ ತುಂಬಿದ ಮೀನನ್ನು ನೋಡಿ ಕಾದರ್ ಸಂತೋಷದಿಂದ ಕೂಗಿಕೊಂಡನು.

"ಹೋ! ಅಪ್ಪುವೆಂದರೆ ಸಾಹಸಿ—ದೋಣಿ ತುಂಬಾ ಮೀನಿದೆ."

ಹಿಂದುಮುಂದೋಡುವ ತೆರೆಗಳ ಮೇಲೆ ದೋಣಿ ತೇಲುತ್ತಿತ್ತು— ಒಮ್ಮೆ ದಡದೆಡೆಗೆ; ಇನ್ನೊಮ್ಮೆ ಸಾಗರಕ್ಕೆ ಸಾಹಸದಿಂದ ಅಪ್ಪು ದೋಣಿ

ಯನು ದಡ ಸೇರಿಸಿದನು. ಕಾದರ್, ಚೆನ್ನಿ- ಎಳೆದು ದೋಣಿಯನ್ನು ದಡವೇರಿಸಿದರು. ದೋಣಿಯಿಂದ ಅಪ್ಪು ಮತ್ತು ಅವನ ಸಹಾಯಕ್ಕೆಂದು ಹೋಗಿದ್ದ ಇನ್ನಿಬ್ಬರು ಹುಡುಗರು ಕೆಳಗಿಳಿದರು. ಅಪ್ಪು ಚೆನ್ನಿಯನ್ನು ನೋಡಿ ಕೇಳಿದನು.

"ಚೆನ್ನಿ, ತುಂಬಾ ಕಾದೆಯಲ್ಲಾ! ನೀನು ಕಾಯುವಿಯೆಂದು ತಿಳಿದೂ ತಡಮಾಡಿದೆ ಆಸೆ ಹೆಚ್ಚಾಯಿತು. ಹಾಗೆಯೇ ಮೀನೂ ಸಿಕ್ಕಿತು ಅನ್ನು."

"ಅಪ್ಪು, ಎಷ್ಟೊಂದು ಹಿಡಿದಿರುವಿ!" ಚೆನ್ನಿ ಮುಖವರಳಿಸಿ ಗೆಲವಿನಿಂದ ನುಡಿದಳು.

ಅನಂತರ ಅಪ್ಪು ಕಾದರ್‌ನೆಡೆಗೆ ತಿರುಗಿ ಪ್ರಶ್ನಿಸಿದನು.

"ಏನು ಕಾದರ್– ವಿಶೇಷವಿತ್ತೇ?"

ಕಾದರ್ ವಿಶೇಷ ಪೀಠಿಕೆಯಿಲ್ಲದೆಯೇ ಕಾರ್ಯವನ್ನು ಮುಂದಿಟ್ಟನು.

"ನಾನು ಮೀನಿನ 'ಕಂಟ್ರಾಕ್ಟು' ಹಿಡಿದಿದ್ದೇನೆ. ಅದಕ್ಕಾಗಿ ಬಂದೆ. ನೀನು ಪ್ರತಿದಿನ ಹಿಡಿದ ಮೀನನ್ನೂ ನನಗೇ ಕೊಡಬೇಕು. ಹೇಗೆ?"

ಅಪ್ಪು ಹೆಚ್ಚು ಯೋಚಿಸದೇ ಒಪ್ಪಿಕೊಂಡನು. ಕಾದರ್ ತನ್ನ 'ಬೆಲ್ಟಿ'ನ 'ಪರ್ಸಿ'ನಿಂದ ರೂಪಾಯಿ ನೋಟುಗಳನ್ನು ತೆಗೆದು ಅಪ್ಪುವಿನ ಮುಂದೆ ಚಾಚಿ, "ಇಕೋ ಮುಂಗಡ" ಎಂದನು.

ಚೆನ್ನಿ ಕಾದರನ ಉಬ್ಬಿದ ಬೆಲ್ಟಿಗೆ ಸಿಕ್ಕಿಸಿದ ಪರ್ಸನ್ನೇ ನೋಡು ತ್ತಿದ್ದಳು.

೨

ಮೂಡಲಲ್ಲಿ ಅರಣೋದಯವಾಗಿತ್ತು. ಮಧ್ಯರಾತ್ರಿಯ ಅನಂತರ ನಿದ್ರಿಸಿದಂತಿದ್ದ ಸಾಗರ ಮೆಲ್ಲ ಮೆಲ್ಲನೆ ಉಸಿರಾಡತೊಡಗಿತ್ತು. ಚಬುಕಿನ ತೆಂಗಿನ ಮರಗಳಲ್ಲಿ ಗೂಡು ಕಟ್ಟಿದ್ದ ಕಾಗೆಗಳು, ಎದ್ದು ರೆಕ್ಕೆ ಬಡಿದು 'ಕಾಕಾ' ಎನ್ನತೊಡಗಿದ್ದುವು. ಭೂಮಿಯನ್ನು ಮಂಜಿನ ಪರದೆ ಮುಸುಕಿತ್ತು.

ಕಾದರ್ ರೈಲ್ವೆ ಸ್ಟೇಷನ್ನಿಗೆ ನಡೆಯುವವನು ನಿಂತು ಆಚೀಚೆ ನೋಡಿ ದನು. ಕಾಲುದಾರಿಯ ಎರಡು ಬದಿಯಲ್ಲೂ ಸೊಂಟದೆತ್ತರಕ್ಕೆ ಹೊಗೆ

ಸೊಪ್ಪಿನ ಗಿಡಗಳು ಸಾಲುಗಟ್ಟಿ ಬೆಳೆದು ನಿಂತಿದ್ದುವು. ಕಾದರ್ ಅಪ್ಪುವಿನ ಹೊಗೆಸೊಪ್ಪಿನ ಗಿಡಗಳತ್ತ ಕಣ್ಣು ಹಾಯಿಸಿದನು. ನಸುನಗು ಕಣ್ಣುಗಳಲ್ಲಿ ಕುಣಿದಾಡಿತು.

ಚೆನ್ನಿ ಆ ಮುಂಜಾವಿನಲ್ಲೇ ಎದ್ದು ಗಿಡಗಳಿಗೆ ನೀರೆರೆಯುತ್ತಿದ್ದಳು. ಕೊಡ ತುಂಬಿದ ನೀರನ್ನು ಬಗ್ಗಿ ಗಿಡಕ್ಕೆ ಅಭಿಷೇಕ ಮಾಡುವಾಗ ಅವಳ ದೇಹವು ಗಿಡಗಳೆಡೆಯಲ್ಲಿ ಮರೆಯಾಗುತ್ತಿತ್ತು. ಅವಳ ಒಂದು ಹೊರೆ ತಲೆಗೂದಲ ರಾಶಿ ಮಾತ್ರ ಕಪ್ಪಾಗಿ ಎದ್ದು ತೋರುತ್ತಿತ್ತು.

ಕಾದರ್, ಅಲ್ಲೇ ಕಾದನು. ಕೊಡದ ನೀರನ್ನು ಸುರಿದು ಚೆನ್ನಿ ತಲೆಯೆತ್ತಿದಾಗ ಅವಳಿಗೆ ಕಾದರ್ ಕಂಡನು. ಎಂದಿನ ಪರಿಚಯದ ನಗು ಇಬ್ಬರ ತುಟಿಗಳನ್ನೂ ಬಿರಿಯಿಸಿತು.

ಕಾದರ್, 'ಚೆನ್ನೀ...' ಎಂದು ಕರೆದನು. ಹೊಗೆಸೊಪ್ಪಿನ ತೋಟಕ್ಕೆ ಹಾಕಿದ್ದ ಬೇಲಿಯನ್ನು ಕಾಲೆತ್ತಿ ದಾಟಿದನು. ಅವಳ ಬಳಿಗೆ ಸರಸರನೆ ನಡೆದು 'ಚೆನ್ನೀ...' ಎಂದನು.

ಚೆನ್ನಿಯ ಕಣ್ಣಲ್ಲಿ ಕಾತರ ಮೂಡಿತು. ಒಂದು ಹೆಜ್ಜೆ ಹಿಂದರಿದು "ಶ್...ಅಪ್ಪ ಇದ್ದಾನೆ..." ಎಂದಳು. ಕಾದರ್ ಪೆಚ್ಚಾದನು.

ಅಷ್ಟರಲ್ಲಿ, ಹೊಯ್ಗೆಯಲ್ಲಿ ತೋಡಿದ ಚಿಕ್ಕ ಹೊಂಡದಿಂದ ಇನ್ನೊಂದು ಕೊಡ ನೀರು ತುಂಬಿಕೊಂಡು ಅಪ್ಪು ಬಂದನು. ಕಾದರನನ್ನು ನೋಡಿ,

"ಏನು ಕಾದರ್?" ಎಂದು ಕೇಳಿದನು.

"ಏನಿಲ್ಲ ಅಪ್ಪು, ರೈಲ್ವೇ ಸ್ಟೇಷನಿಗೆ ಹೊರಟೆ. ಬಂದ ಹಾಗೆ ನಿನ್ನ ಹೊಗೆಸೊಪ್ಪಿನ ಗಿಡಗಳನ್ನು ನೋಡಿದೆ. ನಿಂತೆ. ಈ ವರ್ಷ ಹೊಗೆಸೊಪ್ಪಿನ ಧಾರಣೆ ಏರುವ ಸಂಭವವಿದೆ. ನಿನ್ನ ಹೊಗೆಸೊಪ್ಪನ್ನು ನನಗೇ ಮಾರುವಿಯಲ್ಲಾ!"

"ಅಲ್ಲದೆ ಉಂಟೇ?" ಅಪ್ಪು ತನ್ನ ಪರಿಚಿತ ನಗುವನ್ನು ನಕ್ಕನು.

"ಚೆನ್ನಾಗಿ ಸಾಕು — ಗಿಡಗಳು ಬೆಳೆಯಲಿ. ಗೊಬ್ಬರ ಹಾಕಲು ಮುಂಗಡ ಹಣವೇನಾದರೂ ಬೇಕೇ?"

"ಯಾಕೆ? ಬೇಡ. ಮೊನ್ನೆ ಕೊಟ್ಟದ್ದೇ ಇದೆ."

"ಅದು ಬೇರೆ - ಇದು ಬೇರೆ. ಇಗೋ, ತೆಗೆದುಕ್ಕೋ ಅಪ್ಪು" ಕಾದರ್ ಪುನಃ ಸೊಂಟ ಪಟ್ಟಿ ಬಿಚ್ಚಿದನು. ಅಪ್ಪುವಿನ ಕೈ ಮುಂದೆ ನೀಡಿತು.

ಚೆನ್ನಿಯ ಕಣ್ಣು ಕಾದರನ ಸೊಂಟದಲ್ಲಿ ನೆಟ್ಟಿತು.

ಹತ್ತಿರದಲ್ಲೇ ರೈಲು 'ಕೂ' ಎಂದು ಕೂಗಿತು.

* * * *

ಅಪ್ಪು ಮೊದಲು ಈಗಿನಷ್ಟು ಬಡವನಾಗಿರಲಿಲ್ಲವಂತೆ. ಅವನ ಕೈಯಲ್ಲೂ ನಾಲ್ಕಾರು ಕಾಸು ಓಡಾಡುತ್ತಿದ್ದ ಕಾಲವೊಂದಿತ್ತು. ಅವನಿಗೆ ಒಬ್ಬನು ಪ್ರಾಯಕ್ಕೆ ಬಂದ ಮಗನೂ ಇದ್ದನು. ಅಪ್ಪು ಹುರುಪಿನಲ್ಲಿ ದೊಡ್ಡ ದೋಣಿ ಕೊಂಡುಕೊಂಡು, ನಾಲ್ಕಾರು ಜನರನ್ನು ಕೂಲಿಗಿಟ್ಟುಕೊಂಡು, ತನ್ನ ಮೀನುಗಾರಿಕೆ ಬೆಳೆಯಿಸುವ ಸಾಹಸಕ್ಕೆ ಕೈಯಿಕ್ಕಿದನು. ಅಲ್ಪ ಸ್ವಲ್ಪ ಲಾಭವೂ ಬಂತು. ಅವನ ವರ್ಚಸ್ಸು ಬೆಸ್ತರಲ್ಲಿ ಹೆಚ್ಚಿತು. ಆದರೆ ಒಂದು ದಿನ ಇದ್ದಕ್ಕಿದ್ದಂತೆಯೇ ಸಿಡಿಲು ಬಡಿಯಿತು. ಸಮುದ್ರದಲ್ಲಿ ಅಪ್ಪುವಿನ ದೋಣಿ ಮುಳುಗಿತು. ದೋಣಿಯೊಡನೆ ಅವನ ಮಗನಾಗಿ, ಮಗನೊಡನೆ ಕೂಲಿಯ ನಾಲ್ಕಾರು ಮಂದಿಯೂ, ಅವರೆಲ್ಲರೊಡನೆ ಅಪ್ಪುವಿನ ಭಾಗ್ಯವೂ...... ಅಪ್ಪು ಕೃಪಣನಲ್ಲ—ತನ್ನಲ್ಲಿದ್ದ ಕಾಸನ್ನು ತನಗಾಗಿ ಮುಳುಗಿದ ಕೂಲಿಯವರ ಕುಟುಂಬಕ್ಕೆ ಪರಿಹಾರ ಧನವೆಂದು ಹಂಚಿದನು

ಅಂದಿನಿಂದ ಅವನ ಬಡತನದ ಬಾಳುವೆ ಸಾಗಿದೆ. ಮಗಳು ಚೆನ್ನಿಯ ಮದುವೆ ಮಾಡುವುದು ಅವನಿಗೆ ಸಮಸ್ಯೆಯಾಗಿದೆ. ಅದಕ್ಕೆಂದೇ ಅವನೀಗ ದುಡಿಯುವುದು. ಮುದಿಪ್ರಾಯದಲ್ಲೂ ಸಾಹಸವೆಲ್ಲವನ್ನೂ ಉಪಯೋಗಿಸಿ ಸಮುದ್ರದಲ್ಲಿ ಬಲೆ ಬೀಸುತ್ತಾನೆ. ನೆಲದಲ್ಲಿ ಕೃಷಿ ಮಾಡುತ್ತಾನೆ. ಈ ವರ್ಷ ಎರಡು ಬೆಳೆಯೂ ಚೆನ್ನಾಗಿದೆ. ಹಣ ಕೂಡಿದರೆ, ಚೆನ್ನಿಯ ಮದುವೆಯನ್ನು ಈ ಬೇಸಗೆಯಲ್ಲೇ ಮಾಡಬೇಕೆಂದಿದ್ದಾನೆ.

ಚೆನ್ನಿಗೆ ಎಲ್ಲವೂ ತಿಳಿದಿದೆ. ತಂದೆಗಾಗಿ ಅವಳು ಮರುಕಪಡುತ್ತಾಳೆ. ಆದರೆ ಅವಳ ಇಪ್ಪತ್ತು ದಾಟಿದ ಪ್ರಾಯ ತಂದೆಯಂತೆ ತಾಳ್ಮೆ ವಹಿಸಲು ಒಪ್ಪುವುದಿಲ್ಲ. ಬೇಡ ಬೇಡವೆಂದರೂ ಕಾದರನ ಪ್ರೀತಿಯ, ಹಣದ ರೂಪದ ಬಲೆ ಅವಳ ಮನಸ್ಸಿನ ಸುತ್ತೂ ಬಿಗಿಯುತ್ತದೆ......

ಅಲ್ಲದೆ ಅವಳ ಬೆಸ್ತರ ಜಾತಿಯಲ್ಲಿ ಕಾದರನಂತಹ ಯುವಕನೊಬ್ಬನೂ ಅವಳಿಗೆ ತೋರಿಬರುವುದಿಲ್ಲ.

ತಂದೆಯೊಬ್ಬನು ಮಾತ್ರ ಇದ್ದರೂ ಅವಳು ಏಕಾಕಿನಿ. ಹೀಗೆ, ಸಾಗರದ ತಡಿಯ ಮರಳುಗಾಡಿನಲ್ಲಿ ಇಪ್ಪತ್ತು ಪ್ರಾಯದ ಅವಳ ಮನಸ್ಸು ಹೊಂಬಣ್ಣದ ಇಪ್ಪತ್ತು ಗರಿಗಳನ್ನು ಕಟ್ಟಿಕೊಂಡು ಆಶೆಯ ಬಾನಲ್ಲಿ ವಿಹರಿಸುತ್ತದೆ. ಕಾದರ್ ಮಾತ್ರ ಅದನ್ನು ಕಂಡವನು.

೩

"ಕಾದರ್.........."

ಚೆನ್ನಿ ಕಾದರ್‌ನನ್ನು ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು.

"ಚೆನ್ನಿ - ಅಳಬೇಡ; ಯಾಕೆ ಅಳುತ್ತಿ?"

ಕಾದರ್ ಸಮಾಧಾನಪಡಿಸಲು ಯತ್ನಿಸಿದನು. ಆದರೆ, ಚೆನ್ನಿ ಸುಮ್ಮನಾಗಲೇ ಇಲ್ಲ. ಅವಳ ಅಳುವಿನ ರಾಗಕ್ಕೆ ಕಡಲೆಡೆಗೆ ಬೀಸುವ ಗಾಳಿಯ ಸುಯ್ಲು ದನಿಗೂಡಿಸಿತ್ತು; ಸಾಗರದ ತೆರೆಗಳ ಸಪ್ಪಳ ತಾಳ ವಿಕ್ಕುತ್ತಿತ್ತು..........

ಸಾಲುಸಾಲಾಗಿ ಬೆಳೆದು ನಿಂತಿದ್ದ ತೆಂಗಿನ ಮರಗಳ ಸೋಗೆಯೆಡೆಯಿಂದ ಚಂದ್ರನ ಬೆಳದಿಂಗಳು ಇಣುಕುತ್ತಿತ್ತು. ಮರಗಳು ಬೆಳೆಯದೆಡೆಯಲ್ಲಿ ಬಿಳಿಯಾದ ಮರಳಿನ ಮೇಲೆ ಬೆಳದಿಂಗಳು ಹರಡಿ ಹಿಮುನುಚ್ಚಿದಂತೆ ತೋರುತ್ತಿತ್ತು. ಸಮುದ್ರದ ತೆರೆಗಳ ಮೇಲೆ ಬೆಳದಿಂಗಳು ಪ್ರತಿಫಲಿಸಿ ಕನ್ನಡಿಯ ಹಾಳೆ ಹಾಳೆಗಳು ಬಂದು ದಡಕ್ಕೆ ಹೊಡೆದು ಚೂರು ಚೂರಾಗುವಂತೆ ತೋರುತ್ತಿದ್ದಿತು.

ಪುರಾತನ ಕಾಲದಲ್ಲಿ ನಾಡನ್ನಾಳಿದ್ದ ರಾಜನೊಬ್ಬನು ಕಟ್ಟಿಸಿದ ಹಳೆಯ ಕೋಟೆಯೊಂದು ತನ್ನ ಭಗ್ನಾವಶೇಷವನ್ನು ಹೆಮ್ಮೆಯಿಂದ ಮೆರೆಸುತ್ತಾ ನಿಂತಿತ್ತು. ಕೋಟೆಯ ಬುರುಜಿನ ಪಕ್ಕದಲ್ಲಿ ಚೆನ್ನಿ ಕಾದರನ ಎದೆಯಲ್ಲೊರಗಿ ಅಳುತ್ತಿದ್ದಳು.

"ಕಾದರ್, ನಾನು ಈ ಕೋಟೆಯಿಂದ ಹಾರಿ ಸಾಯುತ್ತೇನೆ— ಇಲ್ಲವಾದರೆ ಸಮುದ್ರದಲ್ಲಿ ಮುಳುಗುತ್ತೇನೆ. ಈ ನಾಚಿಕೆಯನ್ನು ಹೇಗೆ

ತಾಳಲಿ? ಊರಿನಲ್ಲಿ ಎಲ್ಲರಿಗೂ ಗೊತ್ತಾಗಿದೆ. ಅಪ್ಪನಿಗೂ ಸಂದೇಹ ಮೂಡಿದೆ........"

ಆ ರಾತ್ರಿಯಲ್ಲೂ ದೂರದ ಗುಡಿಸಲಿನಿಂದ ನಾಯಿಯೊಂದು ಊಳಿಟ್ಟು ಚೆನ್ನಿಯ ಮಾತನ್ನು ಅನುಮೋದಿಸಿತು.

"ಚೆನ್ನಿ—ನನ್ನನ್ನು ನಂಬು. ಈ ಒಂದು ದಿನ ತಡೆ. ನಾಳೆಯೇ ನಾವೆಲ್ಲಾದರೂ ಹೋಗೋಣ. ಇಬ್ಬರೂ ತೆಂಕಲಾಗಿ ಕಣ್ಣಾನೂರಿಗೆ ಹೋಗೋಣ. ಇಲ್ಲವಾದರೆ ಬಡಗಲಾಗಿ ಮಂಗಳೂರಿಗೆ ಹೋಗೋಣ. ಅಲ್ಲಿ ಮದುವೆಯಾಗಿ ಸುಖದಿಂದಿರೋಣ."

ಕಾದರ್, ಇನ್ನೂ ಏನೇನೋ ನುಡಿದನು. ಚೆನ್ನಿ ಅವನ ಮಾತನ್ನು ಮೊದಲಿನಿಂದಲೂ ನಂಬಿದವಳು. ಈಗಲೂ ನಂಬತೊಡಗಿದಳು. ಕಾದರ್ ಎಂದೂ ಸುಳ್ಳು ಹೇಳಿದುದನ್ನು ಅರಿಯಳು. ಅವನು ಮಾಪಿಳ್ಳೆಯಾದರೇ ನಾಯಿತು? ಅಂತಹವರು ಹಿಂದೂಗಳಲ್ಲೂ ಇರುವರೇನು?—ಎಂದು ಚೆನ್ನಿ ಎಷ್ಟೋ ಬಾರಿ ಯೋಚಿಸಿದ್ದುಂಟು.

"ಮದುವೆ?—ನೀನು ನನ್ನನ್ನು ಆಗುವೆಯಾ ಕಾದರ್?" ಆಸೆಯಿಂದ ಕೇಳಿದಳು.

"ಆಗದೆ ಮತ್ತೆ? ನನ್ನನ್ನು ನೀನು ತಿಳಿಯದವಳಲ್ಲ. ಚೆನ್ನಿ ಜಾತಿ ಮತ ನಮಗೆ ಅಡ್ಡಿಯಾಗದು. ನಾವು ಖಂಡಿತವಾಗಿಯೂ ಮದುವೆ ಯಾಗುವೆವು"

ಕಾದರ್ ಬೆಳೆದ ವಾತಾವರಣ ಅಂತಹದು. ಜಾತಿಮತದ ಪ್ರಶ್ನೆಗೆ ಹೆಚ್ಚಿನ ಬೆಲೆಯನ್ನು ಅವನು ಕೊಟ್ಟವನಲ್ಲ. ದುಡಿದು ತಿನ್ನುವಾಗ ಆ ಪ್ರಶ್ನೆ ಬರುವುದು ಹೊಟ್ಟೆ ತುಂಬಿದ ಬಳಿಕ.

"ಹೇಳು ಚೆನ್ನಿ, ನನ್ನೊಡನೆ ಬರುವೆಯಲ್ಲವೇ?"

"ನನ್ನನ್ನು ನಿಜವಾಗಿಯೂ ಕರೆದುಕೊಂಡು ಹೋಗುವಿಯಲ್ಲವೇ?

ಕಾದರ್ ಚೆನ್ನಿಯ ತಲೆ ನೇವರಿಸಿದನು. ಅವಳ ಮನಸ್ಸು ಹಗು ರಾಯಿತು.

ಕತ್ತಲಲ್ಲಿ ಚೆನ್ನಿ, ಮರಗಳೆಡೆಯಿಂದ ತನ್ನ ಗುಡಿಸಲೆಡೆಗೆ ದೃಷ್ಟಿಬೀರಿ ದಳು. ಗುಡಿಸಲಲ್ಲಿ ಮಿಣಮಿಣನೆ ದೀಪ ಉರಿಯುತ್ತಿದ್ದುದು ಅವಳಿಗೆ

ತೋರಿತು. ಅವಳಿಗೆ ದಿಗಿಲುಗೊಂಡಿತು. ಕಾದರನ ಕಿವಿಯಲ್ಲಿ ಪಿಸುಗುಟ್ಟಿದಳು:

"ಅಪ್ಪ ಎದ್ದಿದ್ದಾನೆ. ನೋಡು—ದೀಪ. ಇಂದು ಎಲ್ಲವೂ ಅವನಿಗೆ ತಿಳಿಯುವುದು"

ಕಾದರನೂ ನೋಡಿದನು.

"ಆಗುವುದಾಗಲಿ; ಹೆದರಬೇಡ—ನಾನಿರುವೆನು."

ಎಂದು ಕಾದರ್ ಚೆನ್ನಿಯನ್ನು ತಬ್ಬಿಕೊಂಡನು. ಅವನ ತೋಳುಗಳ ಬಲೆ ಅವಳನ್ನು ಬಿಗಿಯಿತು.

೪

ಕಾದರ್ ಈಗ ಕಣ್ಣಾನೂರಿನಲ್ಲಿ ಬಂದು ನೆಲಸಿ ಹಲವು ವರ್ಷಗಳಾಗಿವೆ. ಚೆನ್ನಿ ಈಗ 'ಫಾತಿಮಾ' ಆಗಿದ್ದಾಳೆ. ಅವಳು ಮತಾಂತರ ಹೊಂದಿ, ಮುಸ್ಲಿಂ ಧಾರ್ಮಿಕ ವಿಧಿಯಿಂದ ಕಾದರನ ಮಡದಿಯಾಗಿದ್ದಾಳೆ. ಮುಸ್ಲಿಂ ಧರ್ಮಶಿಕ್ಷಣ ಅವಳಿಗೀಗ ದೊರೆತಿದೆ.

ಚೆನ್ನಿಯನ್ನು ಮುಸ್ಲಿಮಳನ್ನಾಗಿ ಮತಾಂತರಿಸಿ ಕಾದರ್ ಮತ್ತು ಅವಳಿಗೆ ಮದುವೆ ಮಾಡಿದ ಮುಸೀದಿಯು 'ಬಾಜಿ' ಅವರೊಡನೆ ಅತ್ಯಂತ ಸ್ನೇಹಭಾವದಿಂದ ವರ್ತಿಸುತ್ತಾ ಬಂದಿದ್ದಾನೆ. ಅವನ ಉಪದೇಶ—ಶಿಕ್ಷಣಗಳು ಇವರಿಬ್ಬರ ಮನಸ್ಸಿನ ಮೇಲೆ ತುಂಬಾ ಪರಿಣಾಮ ಮಾಡಿವೆ. ಈಗ ಕಾದರ್—ಫಾತಿಮಾ ಇಬ್ಬರೂ ಇಸ್ಲಾಂ ಧರ್ಮದ ಕಟ್ಟ ಅನುಯಾಯಿಗಳು.

ಕೆಲವು ದಶಕಗಳ ಹಿಂದೆ ಮಲಬಾರಿನಲ್ಲಿ ನಡೆದ 'ಮಾಪಿಳ್ಳಾ ದಂಗೆ'ಯಲ್ಲಿ 'ಬಾಜಿ'ಯ ಪ್ರೇರಣೆಯಂತೆ ಕಾದರ್ ಪ್ರಮುಖವಾದ ಪಾಲು ತೆಗೆದುಕೊಂಡನು. ದಕ್ಷಿಣ ಕನ್ನಡದ ತೆಂಕು ಭಾಗಗಳಲ್ಲಿ ದಂಗೆಯ ಪ್ರಚಾರ ಮಾಡಲು ಬಾಜಿಯು ಕಾದರನನ್ನು ಪ್ರೇರಿಸಿದನು. ಹಾಗೆ ಕಾದರ್ ಮರಳಿ ತನ್ನ ಹುಟ್ಟೂರಿಗೆ ಮರಳಬೇಕಾಯಿತು.

'ಫಾತಿಮಾ'ಳಿಗೆ 'ಚೆನ್ನಿ'ಗಿದ್ದ ಸ್ವಾತಂತ್ರ್ಯವಿಲ್ಲ. ಅವಳು ದಿನವಿಡೀ ಮನೆಯೊಳಗೇ ಇರಬೇಕು. ಎಲ್ಲಾದರೂ ಹೊರಗೆ ಹೋಗಬೇಕಾದರೆ

'ಘೋಷಾ' ಹಾಕಿಕೊಳ್ಳಬೇಕು. ಆದರೂ ಕಾದರನ ಮತ್ತು ಇಸ್ಲಾಂ ಧರ್ಮದ ಮೇಲಿನ ಪ್ರೇಮದಲ್ಲಿ ಅವೆಲ್ಲವೂ ಅವಳಿಗೆ ಪ್ರಿಯವಾಗಿವೆ.

ಮಲಬಾರಿನಲ್ಲಿ ದಂಗೆಯ ಪೂರ್ವ ಸಿದ್ಧತೆಯು ಬಿಸಿ ಹರಡಿತ್ತು. ಖಾಜಿಯಿಂದ ಕಾದರನಿಂದ ಫಾತಿಮಾಳಿಗೂ ಅದು ತಿಳಿದಿತ್ತು. ಈಗ ಹಿಂದೂಗಳನ್ನು ನೋಡಿದರೆ ಅವಳ ರಕ್ತ ಕುದಿಯುತ್ತಿತ್ತು. ತನ್ನನ್ನು ಅಂದು ಮನೆಬಿಟ್ಟು ಓಡಿಸಿದ್ದ ತನ್ನ ತಂದೆ ಅಪ್ಪುವಿನ ಮೇಲೂ ಅವಳ ಮನಸ್ಸು ಹೊಗೆಯಾಡುತ್ತಿತ್ತು.

ಕಾದರನು ತನ್ನ ಹುಟ್ಟೂರಲ್ಲಿ ಪರಿಚಿತರನ್ನು ಕಂಡು ದಂಗೆಯ— ಧರ್ಮದ ಸಂದೇಶವನ್ನು ಅವರಿಗೆ ತಿಳಿಸಿದನು. ಎಲ್ಲರೂ ಧರ್ಮದ ಕರೆಗೆ ಓಗೊಟ್ಟರು. ಕಾದರ್ ಒಬ್ಬ ಧರ್ಮವೀರನಾಗಿ ಅವರಿಗೆ ತೋರಿಬಂದನು. ಧರ್ಮದ ರಕ್ಷಣೆ—ಪ್ರಚಾರಗಳಿಗಾಗಿ ಎಲ್ಲರೂ ಸೊಂಟಕಟ್ಟಿದರು. ದೊಣ್ಣೆಗಳು ಸಿದ್ಧವಾದುವು; ಕತ್ತಿಗಳು ಹರಿತವಾದುವು.........

ಬದಲಾದ ಬಿಸಿ ವಾತಾವರಣ ಹಿಂದೂಗಳನ್ನೂ ಹುರಿಯಿತು. ಅವರೂ ತಮ್ಮ ರಕ್ಷಣೆಗೆ ಮುಂದಾದರು. ಅಪ್ಪುವಿಗೆ ತನ್ನ ಮಗಳು ಕಾದರನೊಡನೆ ಓಡಿಹೋದಂದಿನಿಂದ ಮಾಪಿಳ್ಳೆಗಳ ಮೇಲೆ ವೈರ ಮಸೆದಿತ್ತು. ಅವನು ಹಿಂದುಗಳ ಮುಖಂಡನಾದನು. ಬೆಸ್ತರ ಗುಂಪನ್ನು ಕೂಡಿದ, ಹುರಿದುಂಬಿಸಿ, ಕಾಳಗಕ್ಕೆ ಸಿದ್ಧನಾದನು.

ಅಂದು ಮಧ್ಯರಾತ್ರಿಯಲ್ಲಿ ಮಾಪಿಳ್ಳೆಗಳೆಲ್ಲರೂ ಒರಗಿರುವ ಬೆಸ್ತರ ಗುಡಿಸಲಿಗೆ ಬೆಂಕಿಯಿಕ್ಕಿ ಕಗ್ಗೊಲೆ ನಡೆಸಬೇಕೆಂದು ಯೋಚಿಸಿದ್ದರು. ಅಪ್ಪುವಿಗೆ ಅದು ಹೇಗೋ ತಿಳಿದುಬಂದಿತು. ತನ್ನವರ ರಕ್ಷಣೆಗಾಗಿ ಅವನು ಉಪಾಯ ಸಿದ್ಧಗೊಳಿಸಿದನು. ಯಾರಿಗೂ ತಿಳಿಯದಂತೆ ಹಿಂದುಗಳನ್ನೆಲ್ಲಾ ಅಂದು ರಾತ್ರಿ ಕೋಟೆಗೆ ಸಾಗಿಸಿದನು.

ಕಾದರನ ಗುಂಪು ಮಧ್ಯರಾತ್ರಿಯಲ್ಲಿ ಬೆಸ್ತರ ಗುಡಿಸಲುಗಳಿಗೆ ಧಾಳಿಯಿಟ್ಟಿತು. ಬೆಂಕಿಯಿಟ್ಟು ನಲಿದಾಡಿತು.

ಅಷ್ಟರಲ್ಲಿ ಕೋಟೆಯ ಕಡೆಯಲ್ಲಿ ಪಂಜುಗಳು ಉರಿದುವು. ಪಂಜುಗಳ ಬೆಳಕಿನಲ್ಲಿ ಆಯುಧಗಳು ಫಳಫಳಿಸಿದುವು. ಕಾದರನಿಗೆ ಹಿಂದುಗಳ ಮೋಸ ತಿಳಿಯಿತು. ತನ್ನವರನ್ನು ಹುರಿದುಂಬಿಸಿ, ಅವನು ಕೋಟೆಯೆಡೆಗೆ ಧಾಳಿಯಿಟ್ಟನು.

ಕಾದರನ ಗುಂಪಿನ ಆಘಾತಕ್ಕೆ ಕೋಟೆಯ ಬಾಗಿಲು ಕುಸಿಯಿತು. ಕಾದರ್ ತನ್ನ ಗುಂಪನ್ನು ನಡೆಸುತ್ತಾ ಕೋಟೆಯನ್ನು ಪ್ರವೇಶಿಸಲು ಅನುವಾದನು. ಬಾಗಿಲಲ್ಲಿ ಅಪ್ಪು ತನ್ನವರೊಡನೆ ಮಾರ್ಮಲೆತು ನಿಂತಿದ್ದನು. ಸಿಂಹದ ಮರಿಗಳಂತೆ ಒಬ್ಬರನ್ನೊಬ್ಬರು ದಿಟ್ಟಿಸಿದರು. ಹಳೆಯ ನೆನಪುಗಳು ಇಬ್ಬರನ್ನು ಕೆಣಕಿದುವು. ಕಾದರ್ ಕತ್ತಿ ಹಿಡಿದು ಅಪ್ಪುವಿನ ಮೇಲೆ ಹಾರಿದನು. ಅಪ್ಪು ದೊಣ್ಣೆ ಬೀಸಿದನು. ಪೆಟ್ಟಿನಿಂದ ಕಾದರ್ ಮರಳಿ ಏಳುವಷ್ಟರಲ್ಲಿ ಅಪ್ಪುವಿನ ಕೈಗೂ ಕತ್ತಿ ಬಂದಿತ್ತು. ಕತ್ತಿಯಿಂದ ಅಪ್ಪು ಆಘಾತಿಸಿದನು. ಮಿಂಚು ಸುಳಿಯಿತು. ಅಪ್ಪುವಿನ ಕತ್ತಿ ಯಾರನ್ನೋ ಬಲಿ ತೆಗೆದುಕೊಂಡಿತ್ತು.

ಬಿದ್ದಾಗ ತಲೆಗೆ ಕಟ್ಟಿದ್ದ ಮುಂಡಾಸು ಸಡಲಿತು. ಅದರೆಡೆಯಿಂದ ಕಪ್ಪು ಕೇಶರಾಶಿ ಹೊರಸೂಸಿತು. ಕತ್ತಿಯ ಪೆಟ್ಟು ತುಂಡರಿಸಿದ ಅಂಗಿಯೆಡೆಯಿಂದ ಕೆಂಪು ಬಣ್ಣದ 'ಕುಪ್ಪಾಯ' ಇಣುಕಿತು. ಮಿಂಚು ಹೊಡೆದಂತಿದ್ದ ಅಪ್ಪು—ಕಾದರ್ ಇಬ್ಬರೂ ನೋಡಿದರು. ಬಲಿಯಾದುದು ಗಂಡಸಲ್ಲ–ಹೆಂಗಸು! ಕಾದರನಿಗೆ ಆಶ್ಚರ್ಯ—ತನ್ನ ಗುಂಪಿನಲ್ಲಿ ಬಂದ ಹೆಂಗಸು ಯಾರು? ಜಾಗ್ರತೆಯಿಂದ ಅವನು ಬಗ್ಗಿ ನೋಡಿದನು:

ಪೆಟ್ಟಿಗೆ ಬೆನ್ನು ಬಿರಿದು ನರಳುತ್ತಿದ್ದ ಹೆಂಗಸು ನೋವಿನಿಂದ ಚೀರಿದಳು:

'ಅಪ್ಪಾ!"

ಕಾದ ಲಾವಾರಸದ ಎರಕದಂತೆ ಅಪ್ಪುವಿನ ಕಿವಿಯನ್ನು ಕೊರೆಯಿತು ಕರೆ. ಲೋಹಚುಂಬಕದೆಡೆಗೆ ನೆಗೆಯುವ ಕಬ್ಬಿಣದಂತೆ ಕರಗಿ ಬಾಗಿದನು—

ಬಲಿಯಾದವಳು ಕಿರಿಚಿದಳು:

"ಕಾದರ್!......"

ಕಾದರ್ ಅಧೀರನಾಗಿ ಕೂಗಿದನು:

"ಫಾತಿಮಾ!"

ಎಳೆಮಗುವಿನಂತೆ ಅಪ್ಪು ಗೋಗರೆದನು:

"ಚೆನ್ನೀ, ನನ್ನ ಮಗಳೇ!......"

ಇತ್ತಂಡದವರೂ ತಮ್ಮ ನಾಯಕರ ದುರವಸ್ಥೆಯನ್ನು ನೋಡಿ, ಆಯುಧಗಳನ್ನು ಕೆಳಗಿಳಿಸಿದರು. ಉರಿಯುತ್ತಿದ್ದ ಪಂಜಿನಂತೆ ಎಲ್ಲರ ಹೃದಯಗಳೂ ದಗದಗಿಸುತ್ತಿದ್ದುವು..........

*  *  *  *

ಅಪ್ಪು ಅನಂತರ ತನ್ನ ಮಗಳು ಬಿದ್ದಲ್ಲಿ ಒಂದು ಗೋರಿ ಕಟ್ಟಿಸಿದನು. ಅಂತ್ಯ ದಿನದ ತನಕ ಪ್ರತಿ ಸಂಜೆ ಅದಕ್ಕೆ ಹಣತೆ ಹೊತ್ತಿಸಿ ಇಡುತ್ತಿದ್ದನು. ಕಣ್ಣೀರಿನಿಂದ ಕರೆ ಕಟ್ಟಿದ ಅವನ ಕಣ್ಣುಗಳಲ್ಲಿ ಅನಂತರ ಹೆಚ್ಚು ಕಾಲ ಬೆಳಕು ಉಳಿಯಲಿಲ್ಲ. 'ಚೆನ್ನಿ'ಯೆಂದು ಬಿಸುಸುಯ್ಯುವ ಅವನ ಉಸಿರು, ಬಳಿಕ, ಹೆಚ್ಚು ಕಾಲ ಆಡಲಿಲ್ಲ.

ಕಾದರನ ಕತೆ ಅನಂತರ ತಿಳಿದುಬಂದಿಲ್ಲ. ಆದರೆ ಅಪ್ಪು ಮಾತ್ರ ಅಲ್ಲಿ ಪ್ರೇತವಾಗಿ ಈಗಲೂ ರಾತ್ರಿ 'ಚೆನ್ನಿ, ಚೆನ್ನಿ' ಎಂದು ಕೂಗುತ್ತಾ ಅಲೆಯುತ್ತಿದ್ದಾನೆಂದು ಊರವರು ನುಡಿಯುತ್ತಾರೆ.





# ರತ್ನಪ್ರಭಾ

## ೧

ವಿಶಾಲ ಸಾಗರದಲ್ಲಿ ಕತ್ತಲೆಯು ತನ್ನ ಮಾಯಾಜಾಲವನ್ನು ಪಸರಿಸಿತ್ತು. ಸಾಗರೋರ್ಮಿಗಳ ಸಳಸಳ ಸಪ್ಪಳವನ್ನೂ, ಗಾಳಿಯು ಹಡಗಿನ ಪಟವನ್ನು ತಿಕ್ಕಿದಾಗ ಉಂಟಾಗುವ ಪಟಪಟ ಸದ್ದನ್ನು ಬಿಟ್ಟರೆ ಎಲ್ಲೆಡೆಯೂ ನಿಶ್ಶಬ್ದವಾಗಿತ್ತು.

ಹಡಗಿನ ಮೇಲ್ಭಾಗದಲ್ಲಿ ಹಡಗಿನ ಒಡೆಯನಾದ ರತ್ನಪ್ರಭನು ನಿಂತುಕೊಂಡು ಕತ್ತಲನ್ನು ದಿಟ್ಟಿಸುತ್ತಾ ಏನೋ ಯೋಚನೆಯಲ್ಲಿ ತಲ್ಲೀನನಾಗಿದ್ದನು. ಗಾಳಿಯ ವೇಗವು ಮಂದ ಮಂದವಾಗುತ್ತಾ ಚಳಿಯೇರತೊಡಗಿತ್ತು. ಬಾನಿನ ಮೂಡಣಂಚು ಕೆಂಪೇರಲು ಇನ್ನೂ ಸ್ವಲ್ಪಮಾತ್ರ ಸಮಯವಿದೆಯೆಂದು ತೋರುತ್ತಿತ್ತು.

ಹಡಗಿನ ಕರ್ಣಧಾರನು ಸಹಸಾ ಕೂಗಿಕೊಂಡನು.

"ಪ್ರಭೂ, ಮುಂದೆ ಒಂದು ಹಡಗು"

ರತ್ನಪ್ರಭನ ಯೋಚನೆಯು ಕಟ್ಟು ಕಡಿಯಿತು. ಚಟುವಟಿಕೆ ಮೈಯಲ್ಲಿ ಮಿಂಚಿನಂತೆ ಸುಳಿಯಿತು ಕರ್ಣಧಾರನೆಡೆಗೆ ಧೃತಗತಿಯಿಂದ ಸಾಗಿ, ದೂರದರ್ಶಕದ ಮೂಲಕ ಪರೀಕ್ಷಿಸಿದನು. ಸಾಗರದ ದಿಗಂತದಂಚಿನಲ್ಲಿ ಹಡಗಿನಂತೆ ಆಕೃತಿಯುಳ್ಳ ಕಪ್ಪಿನ ಮೊತ್ತವು ನಿಂತಂತೆ ತೋರುತ್ತಿತ್ತು. ಹೆಚ್ಚು ದಿಟ್ಟಿಸಿದಾಗ ಮಾತ್ರ ಅಲ್ಲೊಂದು ಇಲ್ಲೊಂದು ಬೆಳಕಿನ ಕುಡಿ, ಮಿಣುಕು ಹುಳದ ಬೆಳಕಿನಂತೆ ತೋರಿಬರುತ್ತಿತ್ತು.

ರತ್ನಪ್ರಭನ ಮುಖದಲ್ಲಿ ಗೆಲುವಿನ ಕುಡಿ ನಗು ಮೂಡಿತು. ತುಟಿಗಳಂಚು ವಕ್ರವಾಗಿ ಸುರುಟಿಕೊಂಡುವು

"ಹಡಗು ನಿಂತಿದೆಯೋ—ಚಲಿಸುತ್ತಿದೆಯೋ?"

"ಹಡಗು ಲಂಗರು ಹಾಕಿ ನಿಂತಂತಿದೆ ಪ್ರಭೂ—ಹಡಗಿನ ಜನರು ನಿದ್ರಿಸುತ್ತಿರಬೇಕು."

"ನಮ್ಮ ಹಡಗನ್ನು ಬೇಗನೆ ಅಲ್ಲಿಗೆ ನಡೆಸು, ನಿಶ್ಶಬ್ದವಾಗಿ. ನಿದ್ರಿಸುವವರಿಗೆ ಎಚ್ಚರವಾಗದಂತೆ. ಬೆಳಕಾಗುವ ಮೊದಲು ಕಾರ್ಯ ಮುಗಿಯಬೇಕಾಗಿದೆ."

"ಕರ್ಣಧಾರನಿಗೆ ಅಪ್ಪಣೆಯಿತ್ತು ರತ್ನಪ್ರಭನು ಸಿಳ್ಳೂದಿದನು. ಹಡಗಿನ ಪರಿವಾರ ಸಿಳ್ಳಿನ ಅಪ್ಪಣೆಯಂತೆ ಕೂಡಲೇ ಅವನೆದುರಿಗೆ ವಿನೀತವಾಗಿ ಬಂದು ನಿಂತಿತು. ರತ್ನಪ್ರಭನು ಹೇಳಿದನು:

"ಈ ದಿನ ಶುಭದಿನವೆಂದು ತೋರುವುದು. ಬೆಳಗಾಗುವ ಮೊದಲೇ ಕೊಳ್ಳೆ—ಸಿದ್ಧರಾಗಿರಿ."

ಪರಿವಾರ ಯಂತ್ರದಂತೆ ಚಲಿಸಿ ಕ್ಷಣಮಾತ್ರದಲ್ಲಿ ಶಸ್ತ್ರ ಸಜ್ಜಿತವಾಯಿತು.

ಕರ್ಣಧಾರನು ಹಡಗಿನ ಗತಿಯನ್ನು ಏರಿಸಿದನು. ಮುಂಜಾವದ ಮಂದಮಾರುತ ಪ್ರತಿಕೂಲವಾಗಿದ್ದರೂ ಕರ್ಣಧಾರನ ಚಾತುರ್ಯ ಅದಕ್ಕೂ ಮಿಗಿಲಾಗಿತ್ತು. ರತ್ನಪ್ರಭನು ಕರ್ಣಧಾರನ ಬಳಿ ನಿಂತು ವಿದ್ಯಮಾನಗಳನ್ನು ನಿರೀಕ್ಷಿಸುತ್ತಿದ್ದನು.

ರತ್ನಪ್ರಭನ ಹಡಗು ಆ ಹಡಗಿಗೆ ಹೊಂದಿಕೊಂಡು ನಿಂತಿತು. ರತ್ನಪ್ರಭನು ಮೌನವಾಗಿ ತನ್ನವರಿಗೆ ಆ ಹಡಗನ್ನೇರಲು ಸಂಕೇತವಿತ್ತನು. ಇರುವೆಗಳ ಸಾಲಿನಂತೆ ಸದ್ದಿಲ್ಲದೆ ನಮ್ಮ ದಳವು ಹಡಗನ್ನೇರಿತು. ಕ್ಷಣಮಾತ್ರದಲ್ಲಿ ನಿದ್ರಿಸಿದ ಹಡಗಿನಲ್ಲಿ ಚೇತನ ಸಂಚಾರವಾಯಿತು. ಪ್ರಾಣರಕ್ಷಣೆಗಾಗಿ ಆ ಹಡಗಿನವರು ಆಯುಧಪಾಣಿಗಳಾದರು. ಶರವರ್ಷಣ, ಕೃಪಾಣ ಪ್ರಹಾರಗಳ ನಿನಾದವು ಶಾಂತಸಾಗರದೆಡೆಯನ್ನು ಪ್ರಕ್ಷುಬ್ಧಗೊಳಿಸಿತು. ಮೂಡಣಂಚಿನಲ್ಲಿ ಕೆಂಪೇರುವ ಮೊದಲೇ ಎಚ್ಚೆತ್ತ ಹಡಗಿನಲ್ಲಿ ರಕ್ತದ ಕೆಂಪು ಕಾಲುವೆ ಹರಿಯಿತು.

ಹಡಗನ್ನು ಪಾದಾಕ್ರಾಂತಗೊಳಿಸುವುದು ಸುಲಭವಿರಲಿಲ್ಲ. ರತ್ನಪ್ರಭನ ಹಡಗಿಗಿಂತಲೂ ಆ ಹಡಗು ದೊಡ್ಡದಿತ್ತು. ಅದರ ಪರಿವಾರವೂ ದೊಡ್ಡದು. ನೋಡುತ್ತಾ ನಿಂತ ರತ್ನಪ್ರಭನ ಹೃದಯ ಅಶಾಂತವಾಯಿತು. ಕೈಯಲ್ಲಿ ಕತ್ತಿ ಹಿಡಿದು ತಾನೇ ಹಡಗಿನೊಳಗೆ ನುಗ್ಗಿದನು. ಅವನ ಕರವಾಳದ ಕೆನ್ನಾಲಗೆ ಅರಿಶಿರನಾಳಗಳ ಆಹುತಿಯನ್ನು ಬಯಸುವ ಮಾರಿಯಂತೆ ಬಾಯ್ತೆರೆದು ನುಂಗತೊಡಗಿತು.

ಅಷ್ಟರಲ್ಲಿ ಹಡಗಿನ ಅಂತಃಗೃಹದೊಳಗಿಂದ ದೀಪಗಳ ಬೆಳಕಿನಲ್ಲಿ ಗಂಭೀರ ಸುಂದರ ಯುವಕನೊಬ್ಬನು ಶಾಂತಿದೂತನಂತೆ ನಡೆದುಬರುತ್ತಾ ತನ್ನವರಿಗೆ ಕೂಗಿ ಹೇಳಿದನು:

"ಯಾರದು ಹೋರಾಡುವವರು? ಎಲ್ಲರೂ ಆಯುಧಗಳನ್ನು ಇಳಿಸಿರಿ."

ಇಂದ್ರಜಾಲದಂತೆ ತರುಣನ ಆಣತಿಯು ಮದೋದ್ರಿಕ್ತರಾದ ಕಲಿಗಳ ಮೇಲೆ ಪರಿಣಾಮ ಮಾಡಿತು. ಎಲ್ಲರೂ ಆಯುಧವಿಳಿಸಿ ವಿನೀತರಾಗಿ ನಿಂತರು. ರತ್ನಪ್ರಭನ ಪರಿವಾರವೂ ಅಚ್ಚರಿಯಿಂದ ಹೋರಾಟವನ್ನು ನಿಲ್ಲಿಸಿತು.

ತರುಣನು ಪುನಃ ಪ್ರಶ್ನಿಸಿದನು:

"ಯಾರೊಡನೆ ಹೋರಾಡುತ್ತಿರುವಿರಿ?"

ಪರಿವಾರದಲ್ಲಿ, ತರುಣನ ಬಳಿ ನಿಂತಿದ್ದವನೊಬ್ಬನು ನುಡಿದನು:

"ಪ್ರಭೂ ಹಡಗಿಗೆ ದಸ್ಯುದಳದ ಧಾಳಿಯಾಗಿದೆ."

"ದಸ್ಯುಗಳೇ ಅದಕ್ಕಾಗಿ ಜೀವಹಾನಿಯೇಕೆ? ಅವರನ್ನು ಕರೆದು ತಾ."

ಅವನು ಸುತ್ತುಮುತ್ತಲೂ ನೋಡಿದನು. ಯಾರನ್ನು ಕರೆಯಬೇಕೆಂದು ಅವನಿಗೆ ತಿಳಿಯದಾಯಿತು. ಗಟ್ಟಿಯಾಗಿ ಕೂಗಿದನು:

"ನಿಮ್ಮ ನಾಯಕನು ಮುಂದೆ ಬರಲಿ."

ರತ್ನಪ್ರಭನ ಹೆಜ್ಜೆಗಳು ಮುಂದುವರಿದುವು ತರುಣನ ಎದುರಿಗೆ ಹೋಗಿ ನಿಂತನು. ಅವನನ್ನು ನೋಡಿ ತರುಣನು ಅದೇ ಗಂಭೀರ ವಾಣಿಯಿಂದ ನುಡಿಸಿದನು.

"ಪೂಜ್ಯನೇ, ತಮ್ಮ ಪರಿಚಯವು ನನಗಿಲ್ಲ. ನನ್ನ ಹೆಸರು ವಿಶ್ವಬಂಧು. ನಾನು ವರ್ತಕ. ತಮ್ಮ ಪರಿಚಯದ ಕೃಪೆ ತೋರುವಿರಾ?"

ತರುಣನ ಭವ್ಯೋಕ್ತಿಗಳು ರತ್ನಪ್ರಭನ ಅಂತಃಕರಣವನ್ನು ಚುಚ್ಚಿದುವು. ಸಾಹಸದಿಂದ ತನ್ನ ಮನಸ್ಸಿನಲ್ಲಿ ಮುನ್ನಿನ ಬಗರನ್ನೇ ಒಡಮೂಡಿಸಿಕೊಂಡು ನುಡಿದನು:

"ಪರಿಚಯದ ಅಗತ್ಯವಿಲ್ಲ. ಹೇಡಿಯಂತೆ ಕಾಳಗವನ್ನೇ ನಿಲ್ಲಿಸಿದೆ. ನಿನ್ನ ಹಡಗನ್ನು ಪಾದಕ್ರಾಂತಗೊಳಿಸಲು ಬಂದಿರುವೆನು."

"ಅದಕ್ಕಾಗಿ ಜೀವಹಾನಿಯೇಕೆ? ಈ ಹಡಗಿನಲ್ಲಿ ತಮಗೆ ಬೇಕಾದು ದೇನಿವೆಯೋ ಸಂತೋಷದಿಂದ ತೆಗೆದುಕೊಳ್ಳೋಣಾಗಲಿ."

ರತ್ನಪ್ರಭನ ಜೀವಮಾನದಲ್ಲಿ ಸಮುದ್ರದಸ್ಯುಗಳ ಈ ಮಾತು ತೀರ ಹೊಸದು; ಅಪರಿಚಿತ. ಅಚ್ಚರಿಯಿಂದ ಅವನು ದಂಗಾದನು. ಆದರೂ ಅಭ್ಯಾಸ ಬಲದಿಂದ ಕಠೋರತೆಯನ್ನು ಬಿಟ್ಟುಕೊಡದೆ ನುಡಿದನು.

"ನಿನ್ನ ಹಡಗಿನಲ್ಲಿರುವ ಸಮಸ್ತ ಧನರಾಶಿ ನನ್ನದಾಗಬೇಕು."

"ಭಗವಂತನಿಗೆ ಅರ್ಪಣಕ್ಕಾಗಿ ಕೊಂಡುಹೋಗುತ್ತಿದ್ದೇನೆ. ಯಾರಿಗೆ ಅದರ ಅಗತ್ಯವಿದೆಯೋ ಅವರಿಗೆ ಅದು ಸೇರುವುದು ವಿಹಿತ. ಭಗವಂತನ ಇಚ್ಛೆ—ತೆಗೆದುಕೊಳ್ಳೋಣಾಗಲಿ."

ತರುಣನು ನಿಧಾನಿಸದೆ ಉತ್ತರಿಸಿದನು.

ರತ್ನಪ್ರಭನ ಅಚ್ಚರಿಗೆ ಪಾರವಿಲ್ಲ. ಹಾಗೆಯೇ ಹಟವೂ ಹೆಚ್ಚಿತು.

"ನೀನು ನಮ್ಮ ಬಂದಿಯಾಗಬೇಕು."

"ನಿನ್ನ ಹಡಗು ನಮಗೆ ಸೇರತಕ್ಕದ್ದು."

"ಇಷ್ಟು ಪ್ರಾಣಗಳಿಗಿಂತ ಅದೇನೂ ಹೆಚ್ಚಿನದಲ್ಲ. ನಿಮ್ಮ ಇಚ್ಛೆ ಯಂತಾಗಲಿ."

ತರುಣನ ಅಪ್ಪಣೆಯಂತೆ ಆ ಹಡಗಿನ ಪರಿವಾರವೆಲ್ಲವೂ ಆಯುಧ ವನ್ನು ಅಲ್ಲಲ್ಲೇ ಬಿಟ್ಟು ದೂರ ಸರಿಯಿತು. ರತ್ನಪ್ರಭನ ಪರಿವಾರವು ಹಡಗಿನ ಕನಕ ಸಂಗ್ರಹವನ್ನು ದೋಚುವುದರಲ್ಲಿ ನಿರತವಾಯಿತು.

ತರುಣನನ್ನು ಬಂಧಿಯಾಗಿ ತನ್ನ ಹಡಗಿಗೆ ರತ್ನಪ್ರಭನು ಒಯ್ದಾಗ ಮೂಡಣಂಚಿನಲ್ಲಿ ಉಷೆಯು ಕತ್ತಲೆಯ ಪರದೆಯನ್ನು ಸರಿಸಿ ಮೊಗ ದೋರಿದ್ದಳು.

* * * *

ಹಡಗಿನ ಮೇಲ್ಮಾಡದಲ್ಲಿ ಅಂಚಿಗೊರಗಿ ರತ್ನಪ್ರಭನು ನಿಂತಿದ್ದನು. ಮುಂಬೆಳಗಿನ ಅರುಣಪ್ರಭೆ ಸಾಗರದ ನೀರ್ಗನ್ನಡಿಯಲ್ಲಿ ಪ್ರತಿಫಲಿತವಾಗಿ ಅವನ ಮುಖಕಮಲವನ್ನು ರಂಗೇರಿಸಿತ್ತು. ಭಾವನಾನಿಹಿತ ದೃಷ್ಟಿಗಳು ದೂರದಾಗಸವನ್ನು ಅಗೆಯುತ್ತಿದ್ದುವು.

ಸ್ವಲ್ಪ ಹೊತ್ತಿನಲ್ಲಿ ರತ್ನಪ್ರಭನ ಆಪ್ತ ಸೇವಕನಾದ ಸುಭದ್ರನು ಬಂದು ಬಿನ್ನವಿಸಿಕೊಂಡನು:

"ಪ್ರಭೂ, ಏನೋ ಗಾಢ ಚಿಂತೆಯಲ್ಲಿರುವಂತಿದೆ. ದಿನದ ಕರಿಗೆ ಓಗೊಡೋಣಾಗಲಿ – ಬೆಳಕು ಹರಿದಿದೆ"

ರತ್ನಪ್ರಭ ಚಕಿತನಾಗಿ ಹಿಂತಿರುಗಿ ನೋಡಿದನು—

"ಸುಭದ್ರ......"

"ಪ್ರಭೂ..."

ಕಾರ್ಯ ನೆರವೇರಿತೇ?"

"ಹೌದು ಪ್ರಭೂ. ಸುವರ್ಣನಿಧಿ ನಮ್ಮ ಭಂಡಾರವನ್ನು ಸೇರಿತು. ಸೆರೆಯಾದ ಆ ಹಡಗು ನಮ್ಮ ಹಡಗಿನ ಹಿಂದೆ ನಡೆಸಲ್ಪಡುತ್ತಿದೆ."

ರತ್ನಪ್ರಭನು ಕ್ಷಣಹೊತ್ತು ಮೌನವಾಗಿದ್ದನು. ಅನಂತರ ತನ್ನ ಸಮ್ಮೋಹಕ ದೃಷ್ಟಿಗಳನ್ನು ಸುಭದ್ರನಮೇಲೆ ನೆಟ್ಟುನುಡಿದನು:

"ಸುಭದ್ರ, ಆ ತರುಣ ಯಾರೆಂದು ತಿಳಿಯಿತೇ?"

"ಇಲ್ಲ ಪ್ರಭೂ, ವರ್ತಕನಂತೆ ಬಹಳ ಶ್ರೀಮಂತನಿರಬೇಕು ಇಲ್ಲವಾದರೆ ಇಷ್ಟು ಕನಕ ಸಂಗ್ರ........"

"ಸುಭದ್ರ, ಕರ್ಣಧಾರನಿಗೆ ಹೇಳು—ಹಡಗನ್ನು ರತ್ನದ್ವೀಪದೆಡೆಗೆ ನಡೆಸಲಿ."

ಪ್ರಭುವಿನ ಮನಸ್ಸು ಕ್ಷುಬ್ಧವಾಗಿದೆಯೆಂದು ಸುಭದ್ರನಿಗೆ ತಿಳಿಯಿತು. ಆದುದರಿಂದ ಹೆಚ್ಚು ಮಾತಾಡಿಸದೆ ಅಪ್ಪಣೆಯನ್ನು ತಿಳಿಸಲು ಕರ್ಣಧಾರನೆಡೆಗೆ ತೆರಳಿದನು.

೨

ಪೃಥ್ವಿಯ ಗರ್ಭದೊಳಗೆ ಹುದುಗಿರುವ ರತ್ನದಂತೆ ಹಿಂದೂಸಾಗರದಲ್ಲಿ ರತ್ನ ದ್ವೀಪವು ಕಂಗೊಳಿಸುತ್ತದೆ. ರತ್ನಪ್ರಭನು ಆ ದ್ವೀಪದ ಸರ್ವಾಧಿಕಾರಿ ಆತನ ವೈಭವ, ಅಧಿಕಾರ, ಸಂಪತ್ತುಗಳನ್ನು ಆ ದ್ವೀಪದ ಹೆಸರೇ ಸಾರುತ್ತಿತ್ತು. ಕಠೋರ ಹೃದಯಿಯಾದ ಕಡಲುಗಳ್ಳ ರತ್ನಪ್ರಭನು ತನ್ನ ಸಂಪಾದಿತ ಧನವನ್ನು ಮುಕ್ತ ಹಸ್ತನಾಗಿ ಅಲ್ಲಿ ತನ್ನ ವೈಭವ ವಿಲಾಸ

ಗಳನ್ನು ಪೇರಿಸಲು ವ್ಯಯಿಸುತ್ತಿದ್ದನು. ಮಣಿಕನಕ ರಂಜಿತವಾದ ಅಭ್ರಚುಂಬೀ ಸೌಧಗಳು, ಸಾರ್ವರ್ತುಕ ಫಲ ಪುಷ್ಪಶೋಭಿತ ಸಸ್ಯ ಸಮೃದ್ಧ ಉಪವನಗಳೂ ರತ್ನದ್ವೀಪವನ್ನು ಸೌಂದರ್ಯದ ಬೀಡನ್ನಾಗಿಸಿದ್ದವು. ಅಲ್ಲಿ ಎಲ್ಲಿ ನೋಡಿದರಲ್ಲಿ ವಿಲಾಸದ ಮಾಯಾಜಾಲ ಮುಸುಕಿದಂತೆ ತೋರುತ್ತಿತ್ತು. ಆದರೆ, ಆ ವಿಲಾಸದ ವಿಭ್ರಮದ ಬೆನ್ನ ಹಿಂದೆಯೇ ರತ್ನಪ್ರಭನ ಕಠೋರ ಅಧಿಕಾರ ಶಾಸನವೂ ಕ್ಷಣಕ್ಷಣಕ್ಕೆ ಎಚ್ಚರಿಕೆ ಕೊಡುತ್ತಿತ್ತು. ರತ್ನದ್ವೀಪದಲ್ಲಿ ರಾಜಬಂಧಿತನಾಗಿರುವ ವಿಶ್ವಬಂಧುವಿಗೆ ಈ ಅನುಭವ ಆಗಾಗ ಆಗುತ್ತಿತ್ತು.

ವಿಶ್ವಬಂಧು ತಾನು ಬಂಧಿತನಾಗಿರುವ ಸೌಧದ ಮುಂದಿನ ಉಪವನದ ಶಿಲಾ ತಲ್ಪದಲ್ಲಿ ಕುಳಿತು ಯೋಚನಾಮಗ್ನನಾಗಿದ್ದನು. ಸಂಜೆಯ ಸೂರ್ಯನ ಪವಾಡದ ಕಿರಣಗಳು ಜಡವಾದ ಉಪವನವನ್ನು ಸಜೀವಗೊಳಿಸಿದ್ದುವು. ಅನುಭವಿಯಾದ ವಿಶ್ವಬಂಧುವಿನ ಹೃದಯವು ಈ ಸೌಂದರ್ಯದಿಂದ ಪರವಶವಾಗಿತ್ತು.

ಸಂಧ್ಯಾಸಮ್ಮೋಹಿತ ಉಪವನದಲ್ಲಿ ಸಂಧ್ಯಾದೇವಿಯರು ಇಳಿದು ಬಂದಂತೆ ಸುಂದರಿಯರಿಬ್ಬರು ವಿಶ್ವಬಂಧುವಿನೆಡೆಗೆ ನಡೆದುಬಂದರು. ವಿಶ್ವಬಂಧು ಅಚ್ಚರಿಗೊಂಡು ಗೌರವಿಸಲು ಮೇಲೆದ್ದು ನಿಂತನು. ಅವನ ಕಣ್ಣುಗಳು ಸುಂದರಿಯರನ್ನು ದಿಟ್ಟಿಸಿದುವು.

ವಿಶ್ವಬಂಧು ಮೂಕನಾಗಿ ನಿಂತಿದ್ದಾಗ ಸುಂದರಿಯರಲ್ಲಿ ಹಿರಿಯಳಾದವಳು ಮಾತಾಡಿಸಿದಳು:

"ಅತಿಥಿಗಳ ಯೋಗಕ್ಷೇಮವನ್ನು ವಿಚಾರಿಸಲು ರಾಜಕುಮಾರಿಗಳು ಬಂದಿರುವರು. ಇವರು ಮಹಾರಾಜ ರತ್ನಪ್ರಭನ ಸೋದರಿ ಕುಮಾರಿ ರತ್ನಪ್ರಭಾ."

ವಿಶ್ವಬಂಧು ಗೌರವದಿಂದ ರಾಜಕುಮಾರಿಗೆ ವಂದಿಸಿದನು. ರಾಜಕುಮಾರಿಯಲ್ಲವಾದರೂ ಯಾರೂ ತಲೆ ತಗ್ಗಿಸುವ ಸೌಂದರ್ಯ ಅವಳದು.

"ಪೂಜ್ಯರು ಆಸನ ಪರಿಗ್ರಹಿಸಬೇಕು. ನೀವು ಬಂದು ಹಲವಾರು ದಿನಗಳಾದರೂ ನಿಮ್ಮ ವಿಚಾರ ಇದು ತನಕ ಇಲ್ಲಿ ಯಾರಿಗೂ ತಿಳಿದು ಬಂದಿಲ್ಲ. ತಮ್ಮ ಹೆಸರು ಮತ್ತು ತಾವು ವರ್ತಕರೆಂಬುದಿಷ್ಟೇ ನಮಗೆ ಗೊತ್ತು."

ರಾಜಕುಮಾರಿ ವಿಶ್ವಬಂಧುವನ್ನು ನುಡಿಸಿದಳು.

"ಬಂಧಿಸಿಟ್ಟ ರಾಜನು ವಿಚಾರಿಸದಿದ್ದರೂ ತಾವಾದರೂ ಕೇಳುತ್ತಿರುವುದು ಉಚಿತವೇ. ನಾನು ಯವದ್ವೀಪದ ಶ್ರೀಮಂತ ವ್ಯಾಪಾರಿ. ಬೌದ್ಧ ಧರ್ಮಾವಲಂಬಿಯಾದ ನಾನು ಬೋಧಿವೃಕ್ಷಾರ್ಚನೆಗಾಗಿ ಭಾರತದತ್ತ ಪ್ರಯಾಣಿಸುತ್ತಿದ್ದೆನು ಆಗಲೇ ರಾಜರು ನನ್ನನ್ನು ತಮ್ಮ ಅತಿಥಿಗಳಾಗಿ ಪರಿಗ್ರಹಿಸಿದರು."

ವಿಶ್ವಬಂಧುವಿನ ತುಟಿಯಂಚುಗಳಲ್ಲಿ ಕಿಣಕು ನಗೆ ತೋರಿಯೂ ತೋರದಂತೆ ನುಸುಳುತ್ತಿತ್ತು.

"ತಮ್ಮ ಧರ್ಮೋಪಾಸನೆಗೆ ನಮ್ಮಿಂದ ಬಹಳ ತೊಂದರೆಯಾದಂತಾಯಿತು. ಅದನ್ನು ಸಾಧ್ಯವಿದ್ದಷ್ಟು ನಿವಾರಿಸುವುದರಲ್ಲಿ ನಾನೂ ಒಬ್ಬಳು. ತಮ್ಮ ಆಪ್ತ ವರ್ಗದಲ್ಲಿ ನಮ್ಮನ್ನೂ ಪಣಿಕಶ್ರೇಷ್ಠರು ಗಣಿಸಬೇಕು"

ವಿಶ್ವಬಂಧು ದಿಟ್ಟಿಸಿನೋಡಿದನು. ರಾಜಕುಮಾರಿಯ ಕಣ್ಣುಗಳಲ್ಲೂ ಆ ದೀನ ಯಾಚನೆ ಒಡಮೂಡಿತ್ತು. ಅದನ್ನು ಸಲ್ಲಿಸದಿರಲು ವಿಶ್ವಬಂಧುವಿಗೂ ಸಾಧ್ಯವಾಗಲಿಲ್ಲ.

ಹೀಗೆ ರಾಜಕುಮಾರಿ ಮತ್ತು ವಿಶ್ವಬಂಧುವಿನ ಸ್ನೇಹ ಬೆಳೆಯಿತು. ರತ್ನದ್ವೀಪದ ಇಂದ್ರಜಾಲಿಕ ಲೋಕದಲ್ಲಿ ಆ ಮಧುರಾತ್ಮಗಳೆರಡು ಅನುರಾಗ ಬದ್ಧವಾದುವು.

ಆದರೂ ವಿಶ್ವಬಂಧುವು ರಾಜಕುಮಾರಿಯೆದುರಿಗೆ ತನ್ನ ಅನುರಕ್ತಿಯನ್ನು ಪ್ರದರ್ಶಿಸುವುದು ಅಷ್ಟು ಸುಲಭವೆಂದು ಗಣಿಸಲಾರದಾದನು. ತನ್ನನ್ನು ಬಂಧಿಸಿಟ್ಟು ಹಲಗಾಲವಾದರೂ ತನ್ನನ್ನು ಇನ್ನೂ ಮಾತಾಡಿಸದ ರತ್ನಪ್ರಭನ ವರ್ತನೆ ಅವನ ಮನಸ್ಸನ್ನೇ ಚುಚ್ಚುತ್ತಿತ್ತು. ಒಮ್ಮೊಮ್ಮೆ ಚಿಂತಿಸಿದಾಗ ಅವನಿಗೇ ಜಿಗುಪ್ಸೆಯೆನಿಸುತ್ತಿತ್ತು. ಕಡಲುಕಳ್ಳನಾಗದನ್ನು ರತ್ನಪ್ರಭನ ಸೋದರಿಯಲ್ಲಿ ತಾನು ಅನುರಕ್ತನೇ? ಅವನ ಧರ್ಮಬುದ್ಧಿ ಅದನ್ನು ಒಪ್ಪಲಾರದಾಗಿತ್ತು.

*   *   *   *

ಒಂದು ದಿನ ಮುಂಜಾನೆ ರಾಜಕುಮಾರಿ ರತ್ನಪ್ರಭಾ ತನ್ನ ಸೌಧಾಗ್ರದಲ್ಲಿ ನಿಂತುಕೊಂಡು ವಿಶ್ವಬಂಧುವಿನ ಉಪವನದೆಡೆಗೆ ದಿಟ್ಟಿಸುತ್ತಿದ್ದಳು. ಅನುರಾಗ ಅವಳ ಕಣ್ಣುಗಳಲ್ಲಿ ಮಾರ್ದವತೆಯನ್ನು ಮೆತ್ತಿತ್ತು. ಮುಖದಲ್ಲಿ

ಸುಂದರ ಸ್ವಪ್ನಗಳ ಸುಖಾನುಭವ ಲೇಪಿತವಾಗಿತ್ತು. ಬಳಿಯಲ್ಲಿ ನಿಂತಿದ್ದ ಸುಭದ್ರ ಮೆಲ್ಲಮೆಲ್ಲನೆ ನುಡಿದಳು.

"ರಾಜಕುಮಾರಿ, ದಾಸರ ಸಾಹಸವನ್ನು ಮನ್ನಿಸಬೇಕು. ಆದರೂ ನನಗೆನಿಸಿದುದನ್ನು ಹೇಳದಿರಲಾರೆ."

ರತ್ನಪ್ರಭಾ ಅವನೆಡೆಗೆ ತಿರುಗದೇ ನುಡಿದಳು:

"ಹೇಳಿಬಿಡು ಸುಭದ್ರ."

"ನಿಮ್ಮ ಪಿತೃಪಾದರು—ಹಿಂದಿನ ಮಹಾರಾಜರು—ತಮ್ಮ ಅಂತ್ಯ ಕಾಲದಲ್ಲಿ ನಿಮ್ಮಿಂದ ತೆಗೆದುಕೊಂಡ ಪ್ರಮಾಣ ವಚನವನ್ನು ನೀವು ಪಾಲಿಸ ದಿರುವುದು ನಮ್ಮ ದುರ್ದೈವ."

ರಾಜಕುಮಾರಿಯ ಹುಬ್ಬುಗಳು ಆಕುಂಚಿತವಾದುವು. ಕೇಳಿದಳು:

"ವಚನಪಾಲನೆಯಲ್ಲಿ ಏನು ಕೊರತೆಯಾಯಿತು?"

"ಇದು ತಮ್ಮ ಕಾರ್ಯವಲ್ಲ. ವಿಶ್ವಬಂಧುವನ್ನು ತಾವು ಮರೆತು ಬಿಡಿರಿ. ರತ್ನದ್ವೀಪದ ಪಾಲನೆಯ ಹೊಣೆಗಾರಿಕೆಯನ್ನು ನೀವು ನಿರಾಕರಿಸು ವಂತಿಲ್ಲ ಯಾವನೊಬ್ಬ ಅಪರಿಚಿತನಿಗೆ ಈ ರತ್ನದ್ವೀಪದ ಅಧಿಪುತ್ರಿ ಮಾರುಹೋಗುವುದು ಪಿತ್ರಾತ್ಮಕ್ಕೆ ತೃಪ್ತಿನೀಡದು. ರತ್ನದ್ವೀಪವು ಹಿಂದಿನ ಮಹಾರಾಜರ ಹೃದಯಕಲ್ಪ."

ಮಾತುಕೇಳಿ ಕುಮಾರಿಯ ಚೇತನ ವಿಚಾರ ತಂದ್ರಾಜಡಿತವಾಯಿತು.

"ಗೊತ್ತು ಸುಭದ್ರ.........ಆದರೆ........."

ರತ್ನಪ್ರಭಾ ಅನಂತರ ನುಡಿಯಲಿಲ್ಲ. ಅವಳ ಎದೆಯಾಳದಲ್ಲಿ ಜ್ವಾಲಾ ಮುಖಿಯಲ್ಲಿ ಲಾವಾರಸ ಕುದಿಯುತ್ತಿತ್ತು. ವಿಶ್ವಬಂಧುವಿನ ಉಪವನದೆಡೆ ಯಲ್ಲಿ ನೆಟ್ಟ ಅವಳ ನೋಟ ಪರಾವರ್ತಿತವಾಯಿತು.

೩

ರತ್ನದ್ವೀಪದಲ್ಲಿ ಇಂದು ಸಂಭ್ರಮ ನೆಲೆಗೊಂಡಿತ್ತು. ಮಹಾರಾಜ ರತ್ನಪ್ರಭನು ಇಂದು ಸಾಗರಪರ್ಯಾಟನಕ್ಕೆ ತೆರಳುವನು—ಸುದ್ದಿಯು ರತ್ನ ದ್ವೀಪದ ನಿವಾಸಿಕರಲ್ಲಿ ಸಂತೋಷದಂತೆಯೇ ಆಶ್ಚರ್ಯವನ್ನೂ ನೆಲೆಗೊಳಿ ಸಿತ್ತು—ಆದರೆ ಅವನು ಎಂದಿನಂತೆ ಪರಿವಾರಸಮೇತನಾಗಿರುವುದಿಲ್ಲ.

ಬಂದಿಯಾದ ವಿಶ್ವಬಂಧುವನ್ನೂ ಕರೆದೊಯ್ಯುವನು. ವಿಶ್ವಬಂಧುವಿನಿಂದ ಸೆಳೆದುತಂದಿದ್ದ ಅವನ ಹಡಗದಲ್ಲೇ ಸಮುದ್ರಾಟನೆ ಸಾಗಲಿದೆ. ಹಲವಾರು ಸಮಯದಿಂದ ರಾಜನ ಸಮೀಪವರ್ತಿಗಳಾಗಿ ಅವನಲ್ಲಿ ಇತ್ತೀಚೆಗೆ ತಲೆದೋರಿದ್ದ ಬದಲಾವಣೆಗಳನ್ನು ಗುರುತಿಸಿದ್ದ ಅಪ್ಪರಿಗೆ ಇದೊಂದು ಸಮಸ್ಯೆಯಾಗಿತ್ತು. ಆದರೆ ಆ ಸಮಸ್ಯೆಯನ್ನು ಬಿಡಿಸಲು ಅವರಿಂದಾಗಲಿಲ್ಲ.

ವಿಶ್ವಬಂಧುವಿನ ನಾವೆ ಸಿದ್ಧವಾಗಿತ್ತು. ರತ್ನಪ್ರಭನು ವಿಶ್ವಬಂಧುವಿನ ಸೌಧದೆಡೆಗೆ ಸಾಗಿದನು. ವಿಶ್ವಬಂಧು ರಾಜನನ್ನು ಎದುರ್ಗೊಂಡನು.

ರತ್ನಪ್ರಭನು ನುಡಿದನು:

"ಭದ್ರ ತಯಾರಾಗಿರಿ. ಭಾರತ ದೇಶಕ್ಕೆ ಯಾತ್ರಾರ್ಥಿಗಳಾಗಿ ನೀವು ಹೋಗುತ್ತಿದ್ದಿರೆಂದು ತಿಳಿದೆನು. ಆಗ ನಮ್ಮಿಂದಾದ ತಪ್ಪಿಗೆ ಪರಿಹಾರ ವಿಧಿಸಿಕೊಳ್ಳುತ್ತಿದ್ದೇವೆ—ನಿಮ್ಮನ್ನು ನಿಮ್ಮ ಪರಿವಾರ ಹಡಗಿನ ಸಮೇತ ಗಯಾಕ್ಷೇತ್ರದಲ್ಲಿ ಬಿಟ್ಟು ಬರುವೆವು."

ವಿಶ್ವಬಂಧುವಿಗೆ ಸಂತೋಷದ ಬರಸಿಡಿಲು! "ಭಗವಂತನ ಚಿತ್ತ" ಎಂದು ನುಡಿದು ಅವನು ಹೊರಡಲು ತಯಾರಾದನು.

ಹೊರಡುವ ಮೊದಲು ರತ್ನಪ್ರಭಾ ಕುಮಾರಿಯ ಸೌಧದತ್ತ ಅವನ ಕಣ್ಣುಗಳು ದಿಟ್ಟಿಸಿದುವು. ಆದರೆ ಎಂದಿನಂತೆ ರಾಜಕುಮಾರಿ ಅಲ್ಲಿ ತೋರಲಿಲ್ಲ. ಅಲ್ಲಿಂದ ಎಂದಿನಂತೆ ಅವನ ದಿವ್ಯಗಾಯನ ಕರ್ಣಾರಂಜನವಾಗಿ ಗಾಳಿಯಲ್ಲಿ ತೇಲಿಬರಲಿಲ್ಲ. 'ಇದೂ ಭಗವಂತನ ಇಚ್ಛೆ'ಯೆಂದು ಆ ನೆನಪನ್ನೂ ವಿಶ್ವಬಂಧು ಮರೆಯಲೆತ್ನಿಸಿದನು. ಆದರೂ ರತ್ನಪ್ರಭಾಳ ನೆನಪು ಅವನ ಮನಸ್ಸಿನಲ್ಲಿ ಚುಚ್ಚುವ ಮುಳ್ಳಾಗಿಯೇ ಉಳಿಯಿತು.

ರತ್ನಪ್ರಭನೊಡನೆ ತನ್ನ ಹಡಗಿನಲ್ಲಿ ಹತ್ತುತ್ತಾ ರತ್ನದ್ವೀಪವನ್ನು ಬಿಡುವಾಗ ರತ್ನಪ್ರಭಾ ಕುಮಾರಿಯ ನೆನಪು ವಿಶ್ವಬಂಧುವಿನಲ್ಲಿ ಒತ್ತರಿಸಿತು. ತಾನು ಅವಳನ್ನುಳಿದು ಆ ದ್ವೀಪವನ್ನು ಬಿಡಲಾರೆನೆಂದು ಅವನ ಅಂತರಾತ್ಮ ಸಾರಿತು. ಕಣ್ಣುಗಳಲ್ಲಿ ವೇದನೆಯ ಕಂಬನಿ ಸುರಿಯಿತು. ಆದರೂ 'ಭಗವಂತನ ಚಿತ್ತ'ವೆಂದು ಭಗವದ್ಭಕ್ತಿಯಿಂದ ರತ್ನದ್ವೀಪದಿಂದ ಮೊಗತಿರುವಿ ನಡೆದನು.

ರತ್ನದ್ವೀಪದಿಂದ ವೇಗವಾಗಿ ಹಡಗು ಭಾರತ ವರ್ಷದತ್ತ ಸಾಗುತ್ತಿತ್ತು. ಮಳೆಗಾಲ ಸಮೀಪಿಸುತ್ತಿತ್ತು. ಈಶಾನ್ಯ ಮಾರುತಗಳು ಬಂಗಾಳೆ

ಸಮುದ್ರದಲ್ಲಿ ಪ್ರಚಂಡವಾಗಿ ಬೀಸುತ್ತಿದ್ದುವು. ಮೇಘಮಾಲಿಕೆ ಗುಂಪು ಕಟ್ಟಿ ಆಕಾಶದಲ್ಲಿ ನೆರೆದಿತ್ತು.

ಮಹಾರಾಜ ರತ್ನಪ್ರಭನು ಹವೆಯ ಪ್ರತಿಕೂಲತೆಯಿಂದಾಗಿ ಪ್ರಯಾಣದ ಕುರಿತು ಚಿಂತಿತನಾಗಿದ್ದನು.

ಒಂದು ದಿನ ಹವೆಯ ಪ್ರತಿಕೂಲತೆ ವಿಷಮಿಸಿತು. ಸಾಗರದಲ್ಲಿ ಬಿರುಗಾಳಿ ತಲೆದೋರುವ ಲಕ್ಷಣಗಳು ಕಾಣಿಸಿದುವು. ಚಿಂತಾಕ್ರಾಂತನಾದ ರತ್ನಪ್ರಭನೆಡೆಗೆ ಸುಭದ್ರನು ಬಂದು ಹೇಳಿದನು:

"ಪ್ರಭೂ, ಹಡಗು ಮುಂದೆ ಸಾಗುವಂತಿಲ್ಲ. ಇಲ್ಲೇ ಇದ್ದರೂ, ಸುರಕ್ಷಿತವಾಗಿರುವಂತಿಲ್ಲ. ರತ್ನದ್ವೀಪದೆಡೆಗೇ ...."

ರತ್ನಪ್ರಭನು ಸಿಡುಕುಗೊಂಡು ಗದ್ದರಿಸಿದನು:

"ಯಾವ ರತ್ನದ್ವೀಪ? ನಾವು ಹೋಗ ಬೇಕಾಗುದುದು ಗಯಾಕ್ಷೇತ್ರ. ಬಿರುಗಾಳಿಯಿಂದಾಗಿ ಸುಭದ್ರನ ಹೃದಯವೂ ಅಭದ್ರವಾಯಿತೇನು?"

ಸುಭದ್ರನು ಮರುಮಾತಾಡದೆ ನಾಚಿಕೊಂಡು ಹಿಂತೆರಳಿದನು.

ಮುಂದೆ ಕೆಲವೇ ಗಳಿಗೆಗಳಲ್ಲಿ ಬಿರುಗಾಳಿ ರಭಸದಿಂದ ಬೀಸತೊಡಗಿತು. ಹೆಬ್ಬಂಡೆಗಳಂತಹ ತೆರೆಗಳ ಹೊಡೆತಕ್ಕೆ ಹಡಗು ತೊನೆದಾಡತೊಡಗಿತು ಗಾಳಿಯ ಹೊಡೆತಕ್ಕೆ ವಾಯುಪಟಗಳು ಛಿದ್ರವಿಚ್ಛಿದ್ರವಾದುವು. ಪರಿವಾರದಲ್ಲಿ ಹಾಹಾಕಾರವೆದ್ದಿತು. ಹಡಗು ಮುಳುಗಿ ಹೋಗುವ ಲಕ್ಷಣಗಳು ತೋರಿಬಂದುವು. ರತ್ನಪ್ರಭನು ಸುಭದ್ರನನ್ನು ಕರೆದು ನುಡಿದನು:

"ಸುಭದ್ರ, ವಿಶ್ವಬಂಧು ಎಲ್ಲಿದ್ದಾರೆ?"

"ಪ್ರಭೂ, ಅಂತರ್ಗೃಹದಲ್ಲಿ ಭಗವಂತನನ್ನು ಪ್ರಾರ್ಥಿಸುತ್ತಿದ್ದಾರೆ."

ರತ್ನಪ್ರಭನು ಸುಭದ್ರನ ಕೈಹಿಡಿದು ದೀನನಾಗಿ ಪ್ರಾರ್ಥಿಸಿದನು:

"ಸುಭದ್ರ, ನನ್ನದೊಂದು ಕೊನೆಯ ಕೋರಿಕೆ-ನೆರವೇರಿಸುತ್ತೀಯಾ?"

ಮಹಾರಾಜನ ದೀನತೆ ಸುಭದ್ರನ ಹೃದಯವನ್ನು ತಿವಿಯಿತು. ರತ್ನ ಪ್ರಭನು ಆರ್ತನಾಗಿ ಕೇಳಿದನು:

"ಸುಭದ್ರಾ, ನನ್ನ ಈ ಉಡುಪನ್ನು ತೆಗೆದು ಕೊನೆಯ ಬಾರಿಗೆ ನನ್ನನ್ನು ಶೃಂಗರಿಸುತ್ತೀಯಾ?"

ಸುಭದ್ರ ರಾಜನ ಇಂಗಿತ ತಿಳಿದನು. ರಾಜನನ್ನು ಹಡಗಿನೊಳಕ್ಕೆ ಕರೆದೊಯ್ದು ರಾಜನ ವೇಷವನ್ನು ಕಳಚಿ ರಾಜಕುಮಾರಿಯ ವೇಷ ತೊಡಿಸಿದನು. ಶಿಂಗಾರಗೊಂಡ ರಾಜಕುಮಾರಿ ರತ್ನಪ್ರಭಾ ಹೇಳಿದಳು:

"ಸುಭದ್ರಾ, ಗೆಳತೀ, ನೀನೂ ಶೃಂಗರಿಸಿಕೋ."

ರಾಜಕುಮಾರಿಯ ಅಪ್ಪಣೆಯಂತೆ ಸುಭದ್ರಳೂ ನಿಜವೇಷ ಪರಿಧಾನ ಮಾಡಿದಳು. ರತ್ನಪ್ರಭಾ ಸುಭದ್ರಾಳನ್ನು ಅಪ್ಪಿಕೊಂಡು ನುಡಿದಳು:

"ಸುಭದ್ರಾ, ಗೆಳತೀ, ಬಹುಶಃ ಇದು ನಮ್ಮ ಕೊನೆಗಾಲ—ಈಗ ತಮ್ಮ ಆಜ್ಞೆಯನ್ನು ಮೀರಿದುದಕ್ಕಾಗಿ ಪೂಜ್ಯ ಪಿತೃಗಳು ನನ್ನನ್ನು ಕ್ಷಮಿಸುವರಲ್ಲವೇ?"

ಸುಭದ್ರೆಯ ಕಣ್ಣುಗಳಲ್ಲಿ ಕಣ್ಣೀರು ಒಸರಿತು. ಅವಳು ರಾಜಕುಮಾರಿಯನ್ನು ಸಾಂತ್ವನಗೊಳಿಸಿದಳು:

"ಕ್ಷಮಿಸುವರು ಕುಮಾರೀ—ಕ್ಷಮಿಸದಿರಲಾರರು."

"ಹೌದು ಕ್ಷಮಿಸದಿರಲಾರರು ಹೆಣ್ಣಾಗಿ ಹುಟ್ಟಿದುದಕ್ಕೆ ನನ್ನ ಈ ಕೊನೆಗಾಲದಲ್ಲಿ ನನ್ನ ಕರ್ತವ್ಯವನ್ನು ನೆರವೇರಿಸಲು ಹೋಗುತ್ತಿದ್ದೇನೆ. ನಡೆ, ವಿಶ್ವಬಂಧುವಿನೆಡೆಗೆ ನನ್ನನ್ನು ಕರೆದೊಯ್ಯು."

ರಾಜಕುಮಾರಿಯ ಮುಖದಲ್ಲಿ ಕಾತರದ ಹಣತೆ ಉರಿಯುತ್ತಿತ್ತು.

* * * *

ರತ್ನದ್ವೀಪವನ್ನು ಅಗಲಿ ಬಂದ ಈ ದಿನಗಳಲ್ಲಿ ವಿಶ್ವಬಂಧುವಿನ ಚಿತ್ತ ಚಂಚಲವಾಗಿಯೇ ಇರುತ್ತಿತ್ತು. ಭಗವತ್ಪ್ರಾರ್ಥನೆಯಲ್ಲೂ ಮನಸ್ಸು ದೃಢವಾಗಿರುತ್ತಿರಲಿಲ್ಲ. ಬುದ್ಧನ ತೇಜೋರೂಪವನ್ನು ಧ್ಯಾನಿಸುವಾಗ ಅದರ ಬದಲಾಗಿ ಇನ್ನೊಂದು ತೇಜೋರೂಪವು ಅಲ್ಲಿ ಮೂಡಿಬರುತ್ತಿತ್ತು. ಅದು ರತ್ನಪ್ರಭೆಯದೆಂದು ತಿಳಿದಾಗ ವಿಶ್ವಬಂಧು ಚಡಪಡಿಸುತ್ತಿದ್ದನು. ಹೀಗೆ ಕನಸು ಮನಸುಗಳಲ್ಲೂ ರತ್ನಪ್ರಭಳಿಗಾಗಿಯೇ ಅವನು ಕೊರಗುತ್ತಿದ್ದನು.

ಗಯಾಕ್ಷೇತ್ರಕ್ಕೆ ಬೋಧಿವೃಕ್ಷಾರ್ಚನೆಗಾಗಿ ಹೋಗಲು ಮೊದಲಿನಂತೆ ಅವನಲ್ಲಿ ಈಗ ಉತ್ಸಾಹವಿರಲಿಲ್ಲ. ಒಮ್ಮೊಮ್ಮೆ ರತ್ನಪ್ರಭನೊಡನೆ ಹೇಳಿ ರತ್ನದ್ವೀಪದೆಡೆಗೇ ಹಿಂದಿರುಗೋಣವೆನ್ನಿಸುವುದು. ಆದರೆ, ಮರುಕ್ಷಣವೇ ಕಡಲುಗಳ್ಳ ರಾಜನೊಡನೆ ಅದನ್ನು ಯಾಚಿಸುವುದು ಅಸಂಭವವೆಂದು ತೋರಿ ನಿರಾಶನಾಗುತ್ತಿದ್ದನು.

ರಾಜಕುಮಾರಿ ರತ್ನಪ್ರಭಾ ವಿಶ್ವಬಂಧುವಿನ ಕೋಣೆಯನ್ನು ನಿಜವೇಷದಿಂದ ಪ್ರವೇಶಿಸಿದಾಗಲೂ ಅವನು ಅವಳದೇ ಧ್ಯಾನದಲ್ಲಿದ್ದನು. ಅವಳನ್ನು ಅಲ್ಲಿ ನೋಡಿ, ಮಾತಾಡುವ ಚೈತನ್ಯವೂ ಉಳಿಯದಷ್ಟು ಅವನು ದಂಗಾದನು. ಅನಂತರ ಚೇತರಿಸಿಕೊಂಡು ನುಡಿದನು:

"ರಾಜಕುಮಾರಿ, ನೀವು ಇಲ್ಲಿ!"

"ಹೌದು — ನನ್ನ ಪಾಪದ ಪರಿಮಾರ್ಜನಕ್ಕಾಗಿ ಬಂದಿರುವೆ. ಕ್ಷಮಿಸಬೇಕು."

ಎನ್ನುತ್ತಾ ರತ್ನಪ್ರಭಾ ವಿಶ್ವಬಂಧುವಿನ ಕಾಲುಗಳಿಗೆ ಎರಗಿದಳು. ವಿಶ್ವಬಂಧು "ಯಾಕಾಗಿ?" ಎಂಬ ಪ್ರಶ್ನೆಯನ್ನು ಕಣ್ಣುಗಳಲ್ಲೇ ನಿಲ್ಲಿಸಿ ಅವಳನ್ನು ನೋಡಿದನು.

"ನಾನು ಈ ಜೀವನದಲ್ಲಿ ಇಷ್ಟರಲ್ಲಿಯೇ ಎಷ್ಟೋ ಜೀವಹತ್ಯೆಗಳನ್ನು ಗೈದಿದ್ದೇನೆ. ನೀವು ದಯೆ ಧರ್ಮಗಳ ಸಾಕಾರ ಮೂರ್ತಿ. ನೀವು ಕ್ಷಮಿಸಿದರೆ ನನ್ನ ಪಾಪಕ್ಷಾಲನ ಸ್ವಲ್ಪವಾದರೂ ಆಗಬಹುದು."

ರಾಜಕುಮಾರಿ ಕಂಬನಿಯಿಂದ ವಿಶ್ವಬಂಧುವಿನ ಕಾಲುಗಳನ್ನು ತೊಳೆದಳು.

"ರಾಜಕುಮಾರಿ! ನೀವು — ಜೀವಹತ್ಯೆ!"

ವಿಶ್ವಬಂಧುವಿಗೆ ನಂಬಲಾಗಲಿಲ್ಲ.

"ಹೌದು; ನಾನೆಂದರೆ, ತಾವು ನಂಬಲಾರಿರಿ. ಆದರೆ, ನಾನಾಗಿ ಮಾಡಲಿಲ್ಲ-ರತ್ನಪ್ರಭ-ಕಡಲುಗಳ್ಳ ರಾಜ-ನಾಗಿ ಇದೇ ಕೈಗಳಿಂದ ಮಾಡಿದೆ. ರತ್ನಪ್ರಭಾ-ರತ್ನಪ್ರಭ ಎಂದರೆ ಬೇರೆ ಬೇರೆ ವ್ಯಕ್ತಿಗಳಲ್ಲ; ನಾನೊಬ್ಬಳೇ. ಜನ್ಮದಿಂದಲೇ ಈ ಪಾಪ ನನಗಂಟಿತು ನನ್ನ ತಂದೆ ಕಡಲ್ಗಳ್ಳರ ಯಜಮಾನನು. ತಾನು ಆರ್ಜಿಸಿದ ದ್ರವ್ಯಗಳಿಂದ ರತ್ನದ್ವೀಪವನ್ನು ವೈಭವದ ಮನೆಮಾಡಿ ಅಲ್ಲಿ ನೆಲಸಿದರು. ಅವರಿಗೆ ನಾನೊಬ್ಬಳೇ ಮಗಳು. ತನ್ನ ಪರಿವಾರದಲ್ಲಿ ಯಾರನ್ನೂ ಅಂತರಂಗದಲ್ಲಿ ನಂಬದ ಅವರು, ತಮ್ಮ ಐಶ್ವರ್ಯ ವೃತ್ತಿ ಎರಡಕ್ಕೂ ಉತ್ತರಾಧಿಕಾರಿಯಾಗಿ ನನ್ನನ್ನು ಬೆಳೆಸಿದರು. ನಾನು ಹೆಣ್ಣೆಂಬುದು ನನ್ನ ಗೆಳತಿ ಸುಭದ್ರಾ ಮತ್ತು ತಾವು — ಇಬ್ಬರಿಗೇ ಗೊತ್ತು ಪ್ರಜೆಗಳಿಗೆ ಪರಿವಾರಕ್ಕೆ ನಾನು ರತ್ನಪ್ರಭ; ಕಡಲುಗಳ್ಳ ರಾಜ. ಹೆಚ್ಚಾಗಿ ಯಾರಿಗೂ ಬಹಿರಂಗದಲ್ಲಿ ಕಾಣಿಸಿಕೊಳ್ಳದೇ ನಾನು ದಿನಗಳೆಯುತ್ತಿದ್ದೇನೆ.

ಪಾಪಗಳನ್ನೇ ಅಂಧಳಾಗಿ ನಡೆಸುತ್ತಾ ಬಂದೆ, ಆದರೆ, ನಿಮ್ಮನ್ನು ನೋಡಿದಂದು ನನ್ನಲ್ಲಿ ಜ್ಞಾನೋದಯವಾಯಿತು. ರಕ್ತಪಾತ, ಜೀವ ಹಾನಿಯಿಲ್ಲದೆ, ತಮ್ಮ ಕನಕ ಸಿಧಿ ಮತ್ತು ತಮ್ಮನ್ನೂ ನಮ್ಮ ಅಧೀನರಾಗಿಸಿದ ನಿಮ್ಮ ದಯೆ ನನ್ನ ಕಣ್ಣು ತೆರೆಯಿಸಿತು. ತಾವು ಕಸವೆಂದು ಕಂಡ ಕನಕಕ್ಕಾಗಿಯೇ ನಾನು ಎಷ್ಟು ಪಾಪ ಮಾಡಿಲ್ಲ! ಅಂದು ಮೋಹಿತ ಆದರ, ಅನಂತರದ ಪರಿಚಯ ದಿಂದ ಅನುರಾಗವಾಯಿತು. ಆದರೂ ಈ ಪಾಪಿಕರಗಳನ್ನು ನಿಮಗೆ ನೀಡಲು ಅಂಜುತ್ತಲೇ ಇದ್ದೆ. ಕೊನೆಗೊಮ್ಮೆ ಆ ಪಾಪಕೂಪವನ್ನು ತ್ಯಜಿಸಿ ನಿಮ್ಮನ್ನು ಹಿಂಬಾಲಿಸಿ ಬಂದೆ. ಈಗ ಗಯಾಕ್ಷೇತ್ರಕ್ಕೆ ಹೋಗುತ್ತಿರುವೆವು. ಆ ಪುಣ್ಯಕ್ಷೇತ್ರದಲ್ಲಾದರೂ ನನ್ನ ಪಾಪವು ತೊಳೆಯುವುದೋ ಏನೋ ಎಂಬ ಆಸೆ ಮನಸ್ಸಿನಲ್ಲಿ ಕಾದಿಯುತ್ತಿತ್ತು.

"ನಾನು ನಿಜವೇಷವನ್ನು ತೊಡಬಾರದೆಂದೂ, ಸಾಂಸಾರಿಕ ಬಂಧನದಲ್ಲಿ ಬೀಳಬಾರದೆಂದೂ ನನ್ನ ಪಿತನಿಗೆ ನಾನು ವಚನ ಬದ್ಧಳಾಗಿರುವೆನು. ಈಗ ಅದನ್ನು ಪಾಲಿಸಲು ಮನಸ್ಸು ರೋಸಿ ಹೋಗಿದೆ. ಪ್ರಕೃತಿಯ ಶಕ್ತಿ ತನ್ನ ನಿಜತ್ವವನ್ನು ಬಿಂಬಿಸಿದೆ. ಹೆಣ್ತನದಲ್ಲಿ ಮೋಹಿತಗಂಡಿನ ಪ್ರೇಮ ಕವಚ ಕೃತ್ರಿಮದ ತೆರೆಯನ್ನು ಕಳಚಲು ಯತ್ನಿಸುತ್ತಿದೆ

"ಇನ್ನು ಹೆಚ್ಚು ಕಾಲವಿಲ್ಲ. ಹಡಗು ಈಗಲೇ ಮುಳುಗಬಹುದು. ಆದುದರಿಂದ ಕೊನೆಯ ಕಾಲದಲ್ಲಿ ನನಗೆ ಭಗವಂತ ಸ್ವರೂಪರಾದ ನೀವು ಕ್ಷಮಿಸಿದರೆ ನನ್ನ ಮನಸ್ಸು ನೆಮ್ಮದಿಯಾಗುವುದು. ಕ್ಷಮಿಸುವಿರಾ?"

ಆರ್ತಳಾಗಿ ರಾಜಕುಮಾರಿ ಕೇಳಿದಳು. ಅವನ ಕರಾಳ ಕರುಣಕತೆ ಕುದಿದಸೀಸವಂತೆ ವಿಶ್ವಬಂಧುವಿನ ಕರ್ಣಗಳನ್ನೂ ಕೊರೆಯಿತು ಆದರೂ ಅವಳ ಪಶ್ಚಾತ್ತಾಪ ಅವನ ಎದೆಯಲ್ಲಿ ನಟ್ಟಿತು. ಅವನು ನುಡಿದನು:

"ಕ್ಷಮಿಸಲೇನಿದೆ—ರಾಜಕುಮಾರಿ, ನಿನ್ನ ಈ ಪಶ್ಚಾತ್ತಾಪವು ನಿನ್ನನ್ನು ಪರಿಶುದ್ಧಗೊಳಿಸಿದೆ."

ಹಡಗಿನಿಂದ ಭಯಂಕರವಾದ ಆರ್ತಾಲಾಪಗಳು ಕೇಳ ಬಂದುವು. ಆ ಅಂತರ್ಗೃಹದ ಬಾಗಿಲ ಹೊರಗಿನಿಂದ ಸುಭದ್ರಾ ಕೂಗಿಕೊಂಡಳು:

"ರಾಜಕುಮಾರೀ, ಹಡಗು ಮುಳುಗುತ್ತಿದೆ."

ವಿಶ್ವಬಂಧು ಕಾತರನಾಗಿ ರಾಜಕುಮಾರಿಯತ್ತ ದಿಟ್ಟಿಸಿದನು. ರತ್ನ ಪ್ರಭಾ ಅವಿಚಲಳಾಗಿ ನುಡಿದಳು:

"ಪ್ರಿಯ, ಯಾಕೆ ಕಾತರಗೊಳ್ಳಲಿ. ಈ ಪರಿಣಾಮವು ನನ್ನ ಜೀವನಕ್ಕೆ ಹಿತವಾದುದೇ ನನ್ನ 'ಗಯಾಕ್ಷೇತ್ರ'ವಾದ ತಾವು ನನ್ನ ಮುಂದಿರುವಿರಿ. ಪ್ರಿಯ, ಕೊನೆಗಾಲದಲ್ಲಿ ನಿಮ್ಮ ಅಮೃತಹಸ್ತಗಳಿಂದ ಈ ಪಾಪಿ ದೇಹವನ್ನು ಪುನೀತ ಗೊಳಿಸುವಿರಾ?"

ರತ್ನಪ್ರಭೆಯ ಬೇಡಿಕೆ ವಿಶ್ವಬಂಧುವಿನ ಅಂತರಂಗವನ್ನು ಕಲಕಿತು. ರತ್ನಪ್ರಭೆಯನ್ನು ಬರಸೆಳೆದು ಕಂಪಿಸುವ ತುಟಿಗಳಿಂದ ಚುಂಬಿಸಿ ನುಡಿದನು.

ಪ್ರಿಯೇ, ಪಾಪವಾಗಲಿ. ಮೃತ್ಯುವಾಗಲಿ ಈ ಪ್ರೇಮವನ್ನು ಅಪವಿತ್ರ ಗೊಳಿಸದು. ಈ ವಜ್ರಕವಚದಿಂದ ಮೃತ್ಯುವೂ ಹೂವಿನ ಹಾಸಿಗೆಯಂತೆ ಸುಖಾವಹವಾಗುವುದು."

ರತ್ನಪ್ರಭಾ ವಿಶ್ವಬಂಧುವಿನ ಮಾತನ್ನು ಕೇಳುತ್ತಾ ಅವನ ತೋಳ ಸೆರೆಯಲ್ಲಿ ಸುಖಿಯಾಗಿ ಕಣ್ಣು ಮುಚ್ಚಿದಳು.

ಪ್ರಕ್ಷುಬ್ಧ ಸಾಗರವು ಹಡಗನ್ನು ಅಪ್ಪಳಿಸಿ ತುತ್ತು ತುತ್ತಾಗಿ ನುಂಗಿತು. ಹಡಗಿನೊಡನೆ ಆ ದೇಹಗಳೂ ಕಡಲಿನಾಳವನ್ನು ಸೇರಿ ಜಡಲಾದುವು. ಆದರೆ, ಆ ಜೀವ ಜ್ಯೋತಿಗಳು ಮರಣದ ದವಡೆಯನ್ನು ದಾಟಿ ಪ್ರೇಮ ಸಾಗರದಲ್ಲಿ ವಿಹರಿಸುತ್ತಿದ್ದುವು.



# ಸಿಡಿಲು·ಮರಿ

ಅಂದು ಪತ್ತನಾಜೆ. ಬಯಲಾಟದ ಮೇಳಗಳು ಮುಂಬರುವ ಆರು ತಿಂಗಳ ಮಳೆಗಾಲಕ್ಕಾಗಿ ತಮ್ಮ ಆಟಗಳನ್ನು ನಿಲ್ಲಿಸುವ ದಿನ. ಕಳೆದ ಆರು ತಿಂಗಳುಗಳಿಂದ ಗೆಜ್ಜೆ ಕಟ್ಟಿ, ಬಣ್ಣ ಬಳಿದು, ವೇಷತೊಟ್ಟು ಕುಣಿದ ವೇಷಧಾರಿಗಳು, ಇನ್ನು ತಮ್ಮ ಮನೆ ಮಾರುಗಳನ್ನು ಸೇರಿ, ಅಗಲಿದ್ದ ಮಡದಿ ಮಕ್ಕಳ ಮುಖಗಳನ್ನು ಕಾಣಬೇಕು; ತಮಗಿದ್ದ ತುಂಡು ಹೊಲದಬೇಸಾಯವನ್ನು ಪೂರೈಸಬೇಕು.

ಆ ದಿನ ಎಲ್ಲಾ ಮೇಳಗಳೂ ತಮ್ಮ ತಮ್ಮ ಊರನ್ನು ಸೇರುವುವು. ಅಂದು ರಾತ್ರಿ ತಮ್ಮ ಇಷ್ಟ ದೇವತೆಯೆದುರು ಕೊನೆಯ ಆಟವನ್ನು ಆಡಿ, ಗೆಜ್ಜೆಪೂಜೆಗೈದು, ಮರುದಿನ ತಮ್ಮ ತಮ್ಮ ಹಾದಿಯನ್ನು ಮೇಳದವರು ಹಿಡಿಯುವರು. ಅವರು ಮುಂದೆ ಒಟ್ಟುಗೂಡುವುದು ಮಳೆಗಾಲದ ಆರು ತಿಂಗಳು ಕಳೆದ ಬಳಿಕ.

ಕುಂಬಳೆಯ ಶ್ರೀ ಗೋಪಾಲಕೃಷ್ಣ ದೇವಾಲಯದ ಮುಂದುಗಡೆಯಲ್ಲಿ ರಂಗಸ್ಥಳವನ್ನು ನಿರ್ಮಿಸಲಾಗಿತ್ತು. ಅಂದೇ ಊರು ಸೇರಿದ ಪಾರ್ತಿಸುಬ್ಬನ ಕಣಿಪುರದ ಶ್ರೀ ಗೋಪಾಲಕೃಷ್ಣ ಕೃಪಾಪೋಷಿತ ಯಕ್ಷಗಾನ ಮಂಡಲವು ಅಲ್ಲಿ ತಮ್ಮ ಕೊನೆಯಾಟವನ್ನು ಅಂದು ಆಡುವುದು.

ಆಗಲೇ ಸಂಜೆಯಾಗಿತ್ತು. ರಂಗಸ್ಥಳದ ಎರಡೂ ಪಕ್ಕಗಳಲ್ಲಿ ಎರಡು ದೊಡ್ಡದಾದ ದೀವಟಿಗೆಗಳು ಉರಿಸಲ್ಪಟ್ಟಿದ್ದುವು. ರಂಗಸ್ಥಳದಲ್ಲಿ ನಿತ್ಯ ವೇಷಗಳಲ್ಲೊಂದಾದ ಕೋಡಂಗಿಗಳು ಕುಣಿಯುತ್ತಿದ್ದುವು. ಸುತ್ತುಮುತ್ತಲಿನ ಹತ್ತಾರು ಊರುಗಳ ಜನರೆಲ್ಲರೂ ಆ ಗೆಜ್ಜೆಪೂಜೆಯಾಟವನ್ನು ನೋಡಲು ಆಗಲೇ ನೆರೆಯ ತೊಡಗಿದ್ದರು.

ರಂಗಸ್ಥಳದಿಂದ ಸ್ವಲ್ಪದೂರದಲ್ಲಿ ವೇಷಧಾರಿಗಳು ವೇಷಧರಿಸುವ ಚೌಕಿಯಿತ್ತು. ಅಲ್ಲಿ ಆಗಲೇ ಚಟುವಟಿಕೆಗೆ ಆರಂಭವಾಗಿತ್ತು.

ನಟರೆಲ್ಲರೂ ತಮ್ಮ ತಮ್ಮ ಪಾತ್ರಗಳಿಗನುಗುಣವಾಗಿ, ಮುಖಗಳಿಗೆ ಬಣ್ಣಗಳ 'ಚುಟ್ಟಿ' ಬರೆಯುತ್ತಿದ್ದರು.

ಅಂದು ಆಡುವ ಪ್ರಸಂಗವು 'ಅಂಗದ ಸಂಧಾನ'ವೆಂದು ತೀರ್ಮಾನ ವಾಗಿತ್ತು. ಒಡ್ಡೋಲಗ ಪಾತ್ರಧಾರಿಗಳಾದ ರಾಮಲಕ್ಷ್ಮಣರು ಆಗಲೇ ತಮ್ಮ ವೇಷ ಭೂಷಣಗಳನ್ನು ಮುಗಿಸಿ ಸಿದ್ಧರಾಗಿ ಕುಳಿತಿದ್ದರು.

ರಾವಣ ಪಾತ್ರಧಾರಿಯಾದ ಬಣ್ಣದ ಗೋಪಣ್ಣ, ಚೌಕಿಯ ಮಧ್ಯ ಭಾಗದಲ್ಲಿ ಒಂದು ದೊಡ್ಡ ಪೆಟ್ಟಿಗೆಗೊರಗಿ ಕುಳಿತುಕೊಂಡಿದ್ದನು. ಅವನ ಮುಂದೆ ಒಂದು ದೊಡ್ಡ ಕಾಲುದೀಪ ಉರಿಯುತ್ತಿತ್ತು. ಅವನ ಮುಖಕ್ಕೆ ಭಯಂಕರವಾಗಿ 'ಪಟ್ಟಿ'ಗಳನ್ನು ಬರೆಯಲಾಗಿತ್ತು. ಪೆಟ್ಟಿಗೆಗೊರಗಿ ಕುಳಿತ ಅವನ ಬಣ್ಣ ಬಳಿದ ಮುಖದ ಸುತ್ತಲೂ ಹಿಟ್ಟಿನ ಮುಳ್ಳುಗಳನ್ನು ಒಬ್ಬನು ಅಂಟಿಸುತ್ತಿದ್ದನು. ಆ ಕೆಲಸ ಮುಗಿದ ಬಳಿಕ, ಮೂಗಿನ ತುದಿಗೆ, ಹಣೆಗೆ, ಹತ್ತಿಯ ಉಂಡೆಗಳನ್ನು ಅಂಟಿಸಿದರು. ಅದೂ ಮುಗಿದ ಬಳಿಕ, ಗೋಪಣ್ಣ ಎದ್ದು ನಿಂತನು. ಒಂದೊಂದಾಗಿ ಉಡಿಗೆ ಆಭರಣಗಳನ್ನು ಅವನಿಗೆ ತೊಡಿಸಿದರು. ಬಣ್ಣ ಬಣ್ಣದ ತೊಡಿಗೆ, ಭುಜ ಕೀರ್ತಿ, ಎದೆಗಟ್ಟು, ವೀರ ಕಾಸೆ,— ಎಲ್ಲವನ್ನೂ ತೊಟ್ಟಾಯಿತು. ಕೊನೆಗೆ, ಬೃಹತ್ತಾದ, ಚಕ್ರಾಕಾ ರದ ಕಿರೀಟವನ್ನು ತಲೆಗೆ ಕಟ್ಟಿದರು. ಈಗ, ಅವನನ್ನು ನೋಡಿದರೆ ಗಟ್ಟಿ ಯೆದೆಯ ಜವ್ವನಿಗನು ಕೂಡ ಹೆದರಬೇಕು. ಅಷ್ಟು ಭಯಾನಕವಾಗಿತ್ತು ಆ ವೇಷ!

ಇನ್ನೊಂದೆಡೆಯಲ್ಲಿ ರಾವಣನ ಮಂತ್ರಿ ಪ್ರಹಸ್ತನ ವೇಷವನ್ನು ರಾಮ ಚಂದ್ರ ತೊಡುತ್ತಿದ್ದನು. ಹೊಟ್ಟೆಯನ್ನು ದೊಡ್ಡದು ಮಾಡಲು ಎಷ್ಟು ಬಟ್ಟೆಯನ್ನು ಕಟ್ಟಿದರೂ ಅವನಿಗೆ ತೃಪ್ತಿಯಿಲ್ಲ. ಅಂತೂ, ಅವನ ವೇಷವೂ ಸಿದ್ಧವಾಯಿತು.

ಮೇಳದ ಭಾಗವತ—ಯಜಮಾನನಾದ ಕವಿ ಪಾರ್ತಿಸುಬ್ಬ, ಎಲ್ಲ ವನ್ನೂ ದಿಟ್ಟಿಸುತ್ತಾ ಒಂದು ಪೆಟ್ಟಿಗೆಯ ಮೇಲೆ ಗಂಭೀರವಾಗಿ ಕುಳಿತಿದ್ದನು. ನಸುನೀಳವಾದ ಆಕರ್ಷಕವಾದ ಮುಖ. ಭಾವನೆಯ ಕಡಲಲ್ಲೇ ತೇಲುತ್ತಾ, ಕನಸನ್ನೇ ಕಾಣುತ್ತಿರುವ, ಸುಂದರವಾದ ಕಣ್ಣುಗಳು. ಗಟ್ಟಿಮುಟ್ಟಾದ, ಉತ್ತರ ನಿಲುವಿನ ದೃಢದೇಹ. ಪ್ರಾಯವು ಐವತ್ತರ ಗಡಿದಾಟಿತ್ತು. ತಲೆ ಯಲ್ಲಿ ಬೆಳೆದ ತುಂಬುಗೂದಲು, ಹಣೆಯನ್ನು ಬಿಟ್ಟು ಹಿಂದು ಹಿಂದಕ್ಕೆ ಸರಿ ಯುವ ಚಿಹ್ನೆ ತಲೆದೋರಿತ್ತು.

ಪಾತ್ರಧಾರಿಗಳೆಲ್ಲರೂ ತಮ್ಮ ವೇಷ ಸಿದ್ಧವಾದೊಡನೆಯೇ, ತಮ್ಮ ಯಜಮಾನನಾದ ಪಾರ್ತಿಸುಬ್ಬನಿಗೆ ತೋರಿಸಿಕೊಂಡು, ಅವನ ಒಪ್ಪಿಗೆ

ಯನ್ನು ಪಡೆಯುತ್ತಿದ್ದರು. ಪಾರ್ತಿಸುಬ್ಬ ಎಲ್ಲರನ್ನೂ ಸೂಕ್ಷ್ಮದೃಷ್ಟಿಯಿಂದ ವಿಮರ್ಶಿಸುತ್ತಾ, ಲೋಪದೋಷಗಳನ್ನು ತಿಳಿಸಿ ಸರಿಗೊಳಿಸುತ್ತಿದ್ದನು. ಬಣ್ಣದ ಗೋಪಣ್ಣನ ಪಾತ್ರವನ್ನು ನೋಡಿ

"ಅದ್ಭುತವಾಗಿದೆ, ಗೋಪಣ್ಣ. ಬಣ್ಣದ ವೇಷದಲ್ಲಿ ನಿನ್ನನ್ನು ಮೀರಿಸುವವರು ಇನ್ನಿಲ್ಲವೆನ್ನುವಂತೆ ಮಾಡಿದ್ದೀಯ."

ಎಂದು ಹೊಗಳಿದನು. ಗೋಪಣ್ಣ ಆ ಮಾತಿಗೆ ವಿನಯದಿಂದ ನಸುನಾಚಿ,

"ಎಲ್ಲಾ ನಿಮ್ಮ ಪ್ರೀತಿ. ಏನೂ ತಿಳಿಯದ ಹಳ್ಳಿಯ ಈ ಕುರುಬನಿಗೆ ಒಂದಿಷ್ಟು ವಿದ್ಯೆ ಕಲಿಸಿದಿರಿ. ದಂಡಿನಲ್ಲಿದ್ದು, ಕುದುರೆಯೋಡಿಸುವುದನ್ನೇ ಕಲಿತು, ನಡೆಯುವುದನ್ನೇ ಮರೆತುಬಿಟ್ಟಿದ್ದ ಈ ಕಾಲುಗಳಿಗೆ ಕುಣಿತ ಕಲಿಸಿದಿರಿ. 'ಹೊಡಿ, ಕಡಿ, ಬಡಿ' ಎನ್ನುವುದಕ್ಕೆ ಒಗ್ಗಿದ್ದ ನಾಲಿಗೆಗೆ ಒಂದಿಷ್ಟು 'ಅರ್ಥ ಹೇಳುವ' ಅಭ್ಯಾಸ ಮಾಡಿದಿರಿ. ಅಂತೂ ತಮ್ಮ ದಯೆಯಿಂದಾಗಿ, ಅಲ್ಪಸ್ವಲ್ಪ ಕಲಾಸೇವೆ ಮಾಡುವಂತಾಯಿತು" ಎಂದು ನುಡಿದನು.

ಚೌಕಿಯಲ್ಲಿ ಅಷ್ಟು ಜನರಿದ್ದರೂ ಅದು ನಿಶ್ಶಬ್ದವಾಗಿತ್ತು. ಗೋಪಣ್ಣನ ಮಾತನ್ನು ಉಳಿದವರೆಲ್ಲರೂ ಕೇಳಿದರು. ಮೌನವಾಗಿಯೇ ಅವರೆಲ್ಲರೂ ಅವನ ಮಾತಿಗೆ ತಮ್ಮ ಸ್ವರವನ್ನೂ ಸೇರಿಸಿದರು.

ಬಣ್ಣದ ಗೋಪಣ್ಣ ಹೇಳಿದುದು ಬರೀ ಹೊಗಳಿಕೆಯ ಮಾತಲ್ಲ. ಪಾರ್ತಿಸುಬ್ಬನ ಯೋಗ್ಯತೆ ಅದಕ್ಕೂ ಮೀರಿದುದು. ಕಲಾಪ್ರಪಂಚದಲ್ಲಿ ಬೆಳೆದ ಬೃಹತ್ತಾದ ಕಲ್ಪವೃಕ್ಷ ಆತ. ಕಡು ಬಡವನಾಗಿ ಹುಟ್ಟಿದ್ದರೂ ಕಲೆಯ–ಸಾಹಿತ್ಯದ ಮೇಲಿನ ಆಸಕ್ತಿಯಿಂದ ನಿರಂತರವಾಗಿ ದುಡಿದು, ಯಕ್ಷಗಾನದ ಗಣ್ಯ ಕವಿಯಾಗಿದ್ದನು. ಕುಂಬಳೆಯರಸರ ನೆರವಿನಿಂದ ತಾನೇ ಒಂದು ಯಕ್ಷಗಾನ ಮಂಡಲಿಯನ್ನು ಸ್ಥಾಪಿಸಿ, ಯಕ್ಷಗಾನವನ್ನು ತುಂಬಾ ಪ್ರಚಾರಗೊಳಿಸಿ, ಅದನ್ನು ಕನ್ನಡ ಜಿಲ್ಲೆಯಲ್ಲೆಲ್ಲಾ ಹರಡಿದನು. ಕೆಳದಿನಾಯಕರ, ಟಿಪ್ಪುಸುಲ್ತಾನನ, ಕುಂಬಳೆಯರಸರ ದಂಡಿನಲ್ಲಿದ್ದ ತರುಣರಿಗೆ, ಅರ್ಥಗಾರಿಗೆ, ಬಣ್ಣಗಾರಿಕೆ, ಕುಣಿತಗಳನ್ನು ಕಲಿಸಿ ಯಕ್ಷಗಾನದ ನಟರನ್ನಾಗಿ ಮಾಡಿದನು. ಅವರಲ್ಲಿ ಸಿಡಿಲು ಮರಿ ಕೆಂಗಣ್ಣ ನಾಯಕ, ಬಣ್ಣದ ಗೋಪಣ್ಣ, ರಾಮಚಂದ್ರ ಮೊದಲಾದವರು ತುಂಬಾ ಹೆಸರುಪಡೆದು ಪಾರ್ತಿಸುಬ್ಬನ ಪ್ರೀತಿಯ ಶಿಷ್ಯರಾಗಿದ್ದರು.

ಗೋಪಣ್ಣನ ಹೊಗಳಿಕೆಯ ಮಾತುಗಳನ್ನು ಕೇಳಿದ ಪಾರ್ತಿಸುಬ್ಬ ಗಂಭೀರವಾಗಿ ನಕ್ಕು,

"ನಾನೇನು ಮಾಡಿದೆ? ನಿಮ್ಮ ಮನಸ್ಸಿನಲ್ಲಿದ್ದ ಕಲಾಸಕ್ತಿಯೇ ನಿಮ್ಮನ್ನಿಂದು ಈ ಸ್ಥಾನಕ್ಕೆ ಮುಟ್ಟಿಸಿದೆ. ಎಲ್ಲವೂ ಶ್ರೀ ಗೋಪಾಲಕೃಷ್ಣನ ಕೃಪೆ ಗೋಪಣ್ಣ."

ಎನ್ನುತ್ತಾ ದೇವಾಲಯದೆಡೆಗೆ ತಿರುಗಿ ಕೈಮುಗಿದನು. ಅವನೊಡನೆ, ಉಳಿದವರೂ ಆ ಭಕ್ತಿ ಪ್ರವಾಹದಲ್ಲಿ ತೇಲಿ, ತಮಗರಿಯದಂತೆಯೇ ತಾವೂ ಕೈಗಳನ್ನು ಜೋಡಿಸಿದರು.

ರಂಗಸ್ಥಳದಲ್ಲಿ ಸ್ತ್ರೀ ವೇಷ ಕುಣಿಯುತ್ತಿತ್ತು. ಅಲ್ಲಿಂದ ಕೇಳಿಬರುತ್ತಿದ್ದ ಮೃದಂಗದ ತಾಳ ಬದ್ಧವಾದ ಸಪ್ಪಳ ಕೇಳುತ್ತಾ ಚೌಕಿಯಲ್ಲಿದ್ದ ನಟರೆಲ್ಲರೂ ಕುಳಿತಲ್ಲಿಯೇ ತಮ್ಮ ಕಾಲುಗಳನ್ನು ಕುಣಿಸುತ್ತಿದ್ದರು.

"ಹೊತ್ತು ಕಂತಿ ಆಗಲೇ ನಾಲ್ಕು ಗಳಿಗೆ ಕಳೆಯಿತು. ಇನ್ನು ಪ್ರಸಂಗ ಸುರುಮಾಡಬೇಕು."

ಪಾರ್ತಿಸುಬ್ಬ ಅಪ್ಪಣೆಕೊಡುವ ಸ್ವರದಲ್ಲಿ ನುಡಿದನು. ಮೇಳದ ಆಳೊಬ್ಬನು ಭಾಗವತರ ಅಪ್ಪಣೆಯನ್ನು ಮುಟ್ಟಿಸಲು ರಂಗಸ್ಥಳದೆಡೆಗೆ ಧಾವಿಸಿದನು.

"ಏನು ಸಿಡಿಲು ಮರೀ, ಇನ್ನೂ ಆಗಿಲ್ಲವೇ?" ಪಾರ್ತಿಸುಬ್ಬ ಕೇಳಿದನು.

"ಆಯಿತು ಗುರುಗಳೇ, ಇನ್ನೇನು ಕಿರೀಟ ಕಟ್ಟಿಕೊಳ್ಳುತ್ತಿದ್ದೇನೆ"

ಎಂದನು ಕೆಂಗಣ್ಣ ನಾಯಕ. ಕೆಂಗಣ್ಣ ನಾಯಕನು ಆ ಮೇಳದ ಗಣ್ಯ ನಟ; ಪಾರ್ತಿಸುಬ್ಬನ ಮೆಚ್ಚಿನ ಶಿಷ್ಯ. ಅವನ ವಾಕ್ಸಾಮರ್ಥ್ಯ, ನಟನಾ ಚಾತುರ್ಯಗಳಿಗೆ ಮನಸೋತ ಪಾರ್ತಿಸುಬ್ಬ, ಅವನಿಗೆ 'ಸಿಡಿಲು ಮರಿ' ಎಂಬ ಬಿರುದನ್ನಿತ್ತಿದ್ದನು.

'ಸಿಡಿಲುಮರಿ'— ಕವಿ ಪಾರ್ತಿಸುಬ್ಬ, 'ಅಂಗದ ಸಂಧಾನ' ಯಕ್ಷಗಾನ ಕಾವ್ಯ ಬರೆಯುತ್ತಾ, ಎಳೆಯ ವೀರನಾದ ಅಂಗದನ ಪಾತ್ರಕ್ಕೆ ಮನಸೋತು, ಒಲಿದು, ಕೊಟ್ಟ ಬಿರುದು, "ಸಿಡಿಲು ಮರಿಯಂಗದ." ಪಾರ್ತಿಸುಬ್ಬನ ಕನಸಿನ ಪಾತ್ರಸೃಷ್ಟಿಯಾದ ಅಂಗದನನ್ನು ಮೂರ್ತಿಮತ್ತಾಗಿ ಜೀವಂತ ಕಳೆಯಿಂದ ಆಡಿತೋರಿಸಲು ಕೆಂಗಣ್ಣ ನಾಯಕನಿಗಲ್ಲದೆ, ಇನ್ನಾರಿಗೂ

ಆಗುತ್ತಿರಲಿಲ್ಲ. ಆದುದರಿಂದಲೇ ಪಾರ್ತಿಸುಬ್ಬ, ತನ್ನ ಪಾತ್ರದ ಬಿರುದನ್ನು, ಆ ಪಾತ್ರವನ್ನು ಮನವೊಲಿಯುವಂತೆ ಅಭಿನಯಿಸುತ್ತಿದ್ದ ತನ್ನ ಶಿಷ್ಯ ಕೆಂಗಣ್ಣ ನಾಯಕನಿಗೇ ಇತ್ತಿದ್ದನು.

"ಕೆಂಗಣ್ಣ ನಾಯಕ" ಎಂಬ ಅವನ ಹೆಸರೇ ಎಲ್ಲರಿಗೂ ಮರೆತು, ಈಗ ಎಲ್ಲರ ಬಾಯಲ್ಲೂ ಸಿಡಿಲು ಮರಿಯಾಗಿ ಅವನು ವಿರಾಜಿಸುತ್ತಿದ್ದನು.

ಇಂದಿನ ಆಟದಲ್ಲೂ ಸಿಡಿಲು ಮರಿಯು ಸಿಡಿಲುಮರಿಯಂಗದನ ಪಾತ್ರವನ್ನು ವಹಿಸುವನು. ಒಂದೆರಡು ನಿಮಿಷಗಳಲ್ಲಿ ಸಿಡಿಲು ಮರಿ ಕೆಂಗಣ್ಣನಾಯಕ ಅಂಗದನಾಗಿ ಬಂದು ತನ್ನ ಗುರುಗಳ ಮುಂದೆ ನಿಂತು ಕೊಂಡನು. ಪಾರ್ತಿಸುಬ್ಬ ಅವನ ವೇಷವನ್ನು ಪರಿಶೀಲಿಸಿ ನುಡಿದನು:

"ಚೆನ್ನಾಗಿದೆ—ಹೋಗು; ಕಲಾಸರಸ್ವತಿಯು, ಶ್ರೀ ಗೋಪಾಲಕೃಷ್ಣನ ಪ್ರೀತ್ಯರ್ಥವಾಗಿ ಅಭಿನಯಿಸು."

ಗುರುಗಳ ಆಶೀರ್ವಾದದೊಡನೆ ಸಿಡಿಲುಮರಿ ಚೌಕಿಯಿಂದ ಹೊರಗೆ ಕಾಲಿಟ್ಟನು. ಪಾರ್ತಿಸುಬ್ಬ ಅರೆಕ್ಷಣ ಅವನು ಹೋಗುವುದನ್ನೇ ಗಂಭೀರವಾಗಿ ನೋಡುತ್ತಾ ಕುಳಿತನು. ಅನಂತರ ಎದ್ದು ಭಾಗವತರ ಮುಂಡಾಸನ್ನು ತಲೆಗೆ ಕಟ್ಟಿ, ಕಲಾಸರಸ್ವತಿಯನ್ನು ಮನಸ್ಸಿನಲ್ಲಿಯೇ ಧ್ಯಾನಿಸಿ, ತನ್ನ ಜಾಗಟೆಗೆ ನಮಸ್ಕರಿಸಿ ಅದನ್ನು ಕೈಗೆತ್ತಿಕೊಂಡು ರಂಗಸ್ಥಳದೆಡೆಗೆ ನಡೆದನು. ಪಾತ್ರಧಾರಿಗಳೆಲ್ಲರೂ ಅವನನ್ನು ರಂಗಸ್ಥಳದ ಹಿಂಬದಿಯ ತನಕ ಹಿಂಬಾಲಿಸಿದರು.

ಪಾರ್ತಿಸುಬ್ಬ ಬಂದೊಡನೆಯೇ ಗೌರವದಿಂದ ಎಲ್ಲರೂ ಎದ್ದು ನಿಂತರು. ಅಷ್ಟರ ತನಕ, ಸಭಾಲಕ್ಷಣ ಪದಗಳನ್ನು ಹಾಡುತ್ತಾ ನಿತ್ಯವೇಷಗಳನ್ನು ಕುಣಿಸುತ್ತಿದ್ದ ಕಿರಿಯ ಭಾಗವತ ಎದ್ದು ಬಂದನು. ಪಾರ್ತಿಸುಬ್ಬನು ಮೃದಂಗಕ್ಕೆ ನಮಸ್ಕರಿಸಿ ತನ್ನ ಸ್ಥಾನದಲ್ಲಿ ಕುಳಿತುಕೊಂಡನು. ಅನಂತರ 'ಪ್ರಸಂಗ ಪೀಠಿಕೆ' ಆರಂಭವಾಯಿತು.

ಅಷ್ಟರಲ್ಲಿ ಅರಸರು ಆಟನೋಡುವುದಕ್ಕಾಗಿ ಬಂದು ಕುಳಿತರು. ಅವರಿಗಾಗಿಯೇ ರಂಗಸ್ಥಳದ ಬದಿಯಲ್ಲಿ ಒಂದು ವೇದಿಕೆಯನ್ನೂ ಕಟ್ಟಿ ಸಿಂಗರಿಸಿದ್ದರು. ಅವರು ಬಂದೊಡನೆಯೇ ಸಭೆ ಗಂಭೀರವಾಗಿ ಎದ್ದು ನಿಂತು ಗೌರವ ಸೂಚಿಸಿತು.

ಅರಸರ ಅಪ್ಪಣೆಯಂತೆ ಕಥಾಭಾಗವನ್ನು ಪ್ರಾರಂಭ ಮಾಡಲಾಯಿತು ರಂಗಭೂಮಿಗೆ ಪರದೆಯನ್ನು ಹಿಡಿದರು-- ಕ್ರಮದಂತೆ ರಾಮಲಕ್ಷ್ಮಣರ ಒಡ್ಡೋಲಗವಾಯಿತು. ಅನಂತರ ಸುಗ್ರೀವನ ಪ್ರವೇಶವಾಯಿತು. ರಾವಣನೊಡನೆ ಯುದ್ಧ ಹೂಡುವ ಮೊದಲೊಮ್ಮೆ ರಾಯಭಾರಿಯೊಬ್ಬನನ್ನು ಕಳುಹಿಸಬೇಕೆಂಬ ಅಭಿಪ್ರಾಯ ಬಂದಾಗ, ಸುಗ್ರೀವನು, ತನ್ನಣ್ಣನ ಮಗನಾದ ಮಹಾಶೂರ ಅಂಗದನನ್ನು ಕಳುಹಿಸಬಹುದೆಂದು ಸೂಚಿಸಿದನು. ರಾಮಲಕ್ಷ್ಮಣರು ಅದಕ್ಕೆ ಒಪ್ಪಿ. ಅಂಗದನನ್ನು ಸನ್ನಿಧಿಗೆ ಕರೆಯಲು ದೂತರನ್ನು ಕಳುಹಿಸಿದರು.

ಶ್ರೀ ರಾಮನಿಂದ ಕರೆಯಲ್ಪಟ್ಟ ಅಂಗದನು ಇನ್ನು ರಂಗ ಭೂಮಿಯನ್ನು ಪ್ರವೇಶಿಸಬೇಕು. ಹಿಮ್ಮೇಳವಾದ ಮೃದಂಗ, ಚಂಡೆ, ಜಾಗಟೆಗಳು ತಾರಕ ಸ್ವರದಲ್ಲಿ ಮೊಳಗುತ್ತಾ ವೀರರಸವನ್ನು ಪ್ರೇಕ್ಷಕರೆದೆಯಲ್ಲಿ ತುಂಬುತ್ತಿದ್ದುವು. ಭಾಗವತರು ಉಚ್ಚಸ್ವರದಲ್ಲಿ ಅಂಗದನ ಪ್ರವೇಶದ ಪದವನ್ನು ಹಾಡುತ್ತಿದ್ದರು:

"ರಾಮನಾಣತಿಯಂತೆ ಸಿಡಿಲು ಮರಿಯಂಗದನು......"

ಪ್ರೇಕ್ಷಕರೆಲ್ಲರೂ, ವೀರರಸವನ್ನು ಉಕ್ಕೇರಿಸುವ ಸನ್ನಿವೇಶದಲ್ಲಿ ತಲ್ಲೀನರಾಗಿ, ವೀರ ಮೂರ್ತಿ ಅಂಗದನ ಬರವನ್ನೇ ಹಾರೈಸುತ್ತಾ ಕುಳಿತಿದ್ದರು. ಸನ್ನಿವೇಶ, ಹಾಡು, ಹಿಮ್ಮೇಳಗಳು ಪ್ರೇಕ್ಷಕರನ್ನು ಕುತೂಹಲದ ಬಂದಿಯಾಗಿ ಮಾಡಿದ್ದುವು.

ಅಂಗದನು ಇನ್ನೇನು ರಂಗಭೂಮಿಯನ್ನು ಪ್ರವೇಶಿಸಬೇಕು–ಅಷ್ಟರಲ್ಲಿ ಕುದುರೆಯೊಂದು ಬಯಲಾಟ ನಡೆಯುತ್ತಿದ್ದೆಡೆಗೆ ನೆಗೆದು ಬಂತು. ಕುದುರೆಯನ್ನೇರಿದ್ದ ಸವಾರನು, ಕುದುರೆಯಿಂದ ಹಾರಿ ಕೆಳಗೆ ನಿಂತನು. ಅವನೊಬ್ಬ ಸೈನಿಕ. ಅರಸನೆಡೆಗೆ ಥಕ್ಕನೆಸರಿದು ವಿನಯದಿಂದ ವಂದಿಸಿ:

"ಮಹಾಪ್ರಭೂ, ಕ್ಷಮಿಸಬೇಕು."

ಎಂದು ತೊದಲಿದನು.

ಈ ವಿಚಿತ್ರ ಘಟನೆಯಿಂದ ಗಾಬರಿಗೊಂಡ ಜನರೆಲ್ಲರೂ ಆಶ್ಚರ್ಯ ಭಯಗಳಿಂದ ಪ್ರೇರಿತರಾಗಿ ಎದ್ದು ನಿಂತರು. ಕ್ಷಣದ ಹಿಂದೆ ಅವರಲ್ಲಿ ಒಡಮೂಡಿದ್ದ ವೀರರಸವು ತಟನಾಗಿ ಕರಗಿಹೋಗಿ, ಈಗ ಯಾವುದೋ ಆ

ಶಂಕೆಯು ಅಜ್ಞಾತ ಭಯವೊಂದು ಅವರನ್ನು ಆವರಿಸಿತ್ತು. ಬಯಲಾಟದ
ಕಥಾಭಾಗ, ಸನ್ನಿವೇಶ, ಎಲ್ಲವೂ ಅವರ ಮನಸದಿಂದ ಮರೆಯಾಗಿದ್ದುವು.

ಅಜ್ಞಾತ ಭಯದಿಂದ ತಳ್ಳಂಕಗೊಂಡ ರಾಜರು, ಸೈನಿಕನನ್ನು ಅವಸರ
ವಸರವಾಗಿ ಪ್ರಶ್ನಿಸಿದರು:

"ಸೈನಿಕ, ಏನಾಯಿತು? ಏನು ನಡೆಯಿತು? ಏನು ಸುದ್ದಿ?"

"ಮಹಾಪ್ರಭೂ, ಕ್ಷಮಿಸಬೇಕು. ಇಂಗ್ಲಿಷರ ಸೈನಿಕರು ಸಾಧಾರಣ
ಐನ್ನೂರು ಮಂದಿ ಕಾಸರಗೋಡಿನ ಕಡೆಯಿಂದ ಇಲ್ಲಿಗೆ ಮುನ್ನುಗ್ಗು
ತ್ತಿದ್ದಾರೆ....."

ಹಾಯಾಗಿ, ಪುರಾಣ ಪುಣ್ಯಕಥೆಯ ನಂದನೋದ್ಯಾನದಲ್ಲಿ, ಕಲಾ
ದೇವಿಯ ಸಿರಿಭೂಮಿಯಲ್ಲಿ, ವಿಹರಿಸುತ್ತಿದ್ದ ಎಲ್ಲರ ಚೈತನ್ಯಗಳ ಮೇಲೂ
ಬರಸಿಡಿಲಿನಂತೆ ಸೈನಿಕನ ಈ ಮಾತು ಅಘಾತಿಸಿತು. ಆ ಹೊಡೆತದಿಂದ
ಅಲ್ಲಿ ಕೂಡಿದ ಸಾವಿರಾರು ಮಂದಿಯಲ್ಲಿ ಪ್ರಜ್ಞೆ ತಪ್ಪಿದವರೆಷ್ಟೋ! ಜಂಘಾ
ಬಲವೇ ಉಡುಗಿ ನೆಲಕ್ಕೆ ಕುಸಿಕೂತವರೆಷ್ಟೋ! ಹೆಂಗಸರು ಮಕ್ಕಳಂತೂ
ತಮ್ಮ ಸರ್ವಸ್ವ ಸೂರೆಯಾದವರಂತೆ ದೊಡ್ಡ ದನಿಯಿಂದ ಅಳ
ತೊಡಗಿದ್ದರು.......

ಸೈನಿಕ ನುಡಿಯುತ್ತಲೇ ಇದ್ದ:

"ಮೈಸೂರಲ್ಲಿ ಟಿಪ್ಪು ಸುಲ್ತಾನನನ್ನು ಶ್ರೀರಂಗ ಪಟ್ಟಣದ ಕೋಟೆಯ
ಬಾಗಿಲಿನಲ್ಲಿ ಇಂಗ್ಲೀಷರು ಕೊಂದು ಹಾಕಿದರಂತೆ. ಟಿಪ್ಪು ಸುಲ್ತಾನನ
ಸಾಮ್ರಾಜ್ಯ ನುಚ್ಚುನೂರಾಯಿತಂತೆ. ಆ ಸಾಮ್ರಾಜ್ಯದ ಮೇಲೆ ಅಘಾತಿಸಿದ
ಧೂಮಕೇತು, ಈಗ ಘಟ್ಟದಿಂದ ಕೆಳಗಿಳಿದಿದೆ. ಟಿಪ್ಪುಸುಲ್ತಾನನ ಸಾಮಂತ
ರಾಗಿದ್ದ ಕನ್ನಡ ಜಿಲ್ಲೆಯ ಒಬ್ಬೊಬ್ಬ ರಾಜನನ್ನೂ ಬಗ್ಗಿಸತೊಡಗಿದ್ದಾರೆ;
ಒಂದೊಂದು ಕೋಟೆಯನ್ನೂ ಅಧೀನಪಡಿಸಿಕೊಳ್ಳತೊಡಗಿದ್ದಾರೆ. ದಕ್ಷಿಣ
ದಲ್ಲಿ ಬೇಕಲ, ಕಾಸರಗೋಡುಗಳಂತಹ ಸುಭದ್ರವಾದ ಕೋಟೆಗಳನ್ನೇ
ಹೊಡೆದು ನುಂಗಿದ ಫಿರಂಗಿ ಯಮರಾಯ, ಈಗ ಉತ್ತರಕ್ಕಾಗಿ ಕುಂಬಳೆಗೆ
ಧಾಳಿಯಿಡುತ್ತಿದ್ದಾನೆ. ಅವರ ಸೈನ್ಯ ಈಗಾಗಲೇ ಅರ್ಧದಾರಿ ದಾಟಿರ
ಬಹುದು.........'

ಸೈನಿಕನ ವಿವರಣೆಗಳೊಂದೂ ಯಾರ ಕಿವಿಯನ್ನೂ ಸೇರುತ್ತಿರಲಿಲ್ಲ.
ತನ್ನ ಕರ್ತವ್ಯವನ್ನು ಮಾಡಿ ಮುಗಿಸುವ ಧನ್ಯತೆಯಿಂದಲೋ ಎಂಬಂತೆ
ಅವನು ನುಡಿಯುತ್ತಿದ್ದನು.

ಅರಸರು ಮೂರ್ಛೆಗೆಟ್ಟಿ ರಾಜಾಸನದಲ್ಲಿಯೇ ಒರಗಿದ್ದರು. ಅವರ ಸುತ್ತಮುತ್ತಲೂ ಇದ್ದ ಪರಿವಾರ, ಕೈಯ್ಯಲ್ಲಿದ್ದ ಆಯುಧಗಳನ್ನು ಮರೆತು, ತಮ್ಮ ಆತ್ಮರಕ್ಷಣೆಯನ್ನು ಮಾಡುವ ಉಪಾಯ ತೋರಿಸೆಂದು ದೇವರನ್ನು ಮೊರೆಯಿಡುತ್ತಿತ್ತು. ಹೊಟ್ಟೆ ತುಂಬಿಸುವುದಕ್ಕಾಗಿ ಮಾತ್ರ ರಾಜನನ್ನು ಓಲೈಸುತ್ತಿದ್ದ ಅವರ ಮನಸ್ಸಿನಿಂದ, ಈ ಗಂಡಾಂತರದ ಸಂದರ್ಭದಲ್ಲಿ ರಾಜಭಕ್ತಿ ಮಾಯವಾಗಿತ್ತು.

ಅನಿರೀಕ್ಷಿತವಾದ, ವಿಧಿಯ ದುಷ್ಟಪೀಡೆ ಎಂಬ ಘಾತದ ಭಯದಿಂದ ಮಂಜುಗಟ್ಟಿ ಅಚಲವಾಗಿದ್ದ ಆ ಗುಂಪಿನಲ್ಲಿ ಕ್ಷಣ ಹೊತ್ತಿನಲ್ಲಿಯೇ ಚೈತನ್ಯ ಸಂಚರಿಸಿತು ಅಲ್ಲಿ ನೆರೆದಿದ್ದ ಧನಿಕರು, ವರ್ತಕರು, ರೈತರು, ತಮ್ಮ ತಮ್ಮ ಸೊತ್ತುಗಳನ್ನೂ, ಕುಟುಂಬಗಳನ್ನೂ ಸೈನಿಕರ ದುರಾಕ್ರಮಣದಿಂದ ಕಾಪಾಡುವುದಕ್ಕಾಗಿ, ತಮ್ಮ ತಮ್ಮ ನಿವಾಸದತ್ತ ಆಕ್ರಂದಿಸುತ್ತಾ ಓಡ ತೊಡಗಿದರು.

ಕ್ಷಣಮಾತ್ರದಲ್ಲಿ, ರಸಸರಸ್ವತಿಯು ಆರಾಧನಾ ಭೂಮಿಯಾದ ರಂಗ ಭೂಮಿ, ಮಸಣದ ಭೀಭತ್ಸತೆಯನ್ನು ತಾಳಿತ್ತು.

ಮೆಲ್ಲಮೆಲ್ಲನೆ ಅರಸರು ಚೇತರಿಸಿಕೊಂಡು ನುಡಿದರು:

"ಎಲ್ಲಿ ನಮ್ಮ ಸೇವಕರು? ನಡೆಯೋಣ — ಅರಮನೆಗೆ. ಏನಾದರೂ ಬರುವ ವಿಪತ್ತಿನಿಂದ ರಕ್ಷಣೆಯ ದಾರಿ ನೋಡಬೇಕಲ್ಲ.

ಅರಸರ ಸೇವಕರು ಕೂಡಿದರು; ಅರಸರನ್ನು ಅರಮನೆಗೆ ಕರೆದೊಯ್ಯಲು ಸಿದ್ಧರಾದರು.

ಈ ಅನಿರೀಕ್ಷಿತ ಆಘಾತದಿಂದ ನೊಂದುಕೊಂಡ ಪಾರ್ತಿಸುಬ್ಬನು ರಂಗ ಭೂಮಿಯಿಂದೆದ್ದು ಅರಸರ ಸಮ್ಮುಖಕ್ಕೆ ಬಂದಿದ್ದನು. ಅವನ ದುಃಖಕ್ಕೆ ಮಿತಿಯಿರಲಿಲ್ಲ. ದೇವರ ಸೇವೆಗಾಗಿ ಆಡುತ್ತಿರುವ ಈ ಬಯಲಾಟವನ್ನು, ಮರ್ಯಾದೆಯಿಂದ ಕೊನೆಗಾಣಿಸುವ ಬಯಕೆ–ಹರಕೆ ದೇವರದಲ್ಲವೇನೋ ಎಂದು ಮನಸ್ಸಿನಲ್ಲಿಯೇ ಮಿಡುಕಿಕೊಂಡನು.

"ಈ ವಿಪತ್ತಿನಿಂದ ಪಾರಾಗುವುದು ಹೇಗೆ?"

—ಎಂಬ ಪ್ರಶ್ನೆ ಎಲ್ಲರ ಮನಸ್ಸನ್ನೂ ಕಾಡುತ್ತಿತ್ತು. ತಮ್ಮ ಅರಸರು ಅಷ್ಟು ಶಕ್ತಿಶಾಲಿಯಲ್ಲ. ಈ ಅರಸರ ತಂದೆಯವರ ಕಾಲದಲ್ಲಿಯೇ ಕುಂಬಳೆಯರಸರ ಪರಾಕ್ರಮ—ಅಟ್ಟಹಾಸ ಮುಗಿದುಹೋಗಿತ್ತು. ಆಗ,

ಕೆಳದಿಯ ನಾಯಕರ ಸಾಮಂತನಾಗಿದ್ದ ಅರಸು, ಚಂದ್ರಗಿರಿ ನದಿಯ ದಕ್ಷಿಣದ ಮಲೆಯಾಳೀ ರಾಜನಾಗಿದ್ದ ಕೋಲತ್ತರಸನೊಡನೆ ಒಳಸಂಚು ಹೂಡಿ ಕೆಳದಿಯ ನಾಯಕರ ಸಾರ್ವಭೌಮತ್ವದ ಹೊರೆಯನ್ನು ತಪ್ಪಿಸಿ ಕೊಂಡು ಸ್ವತಂತ್ರರಾಗಲು ಪ್ರಯತ್ನಿಸಿದ್ದರು. ಅದರಿಂದ ಸಿಟ್ಟುಗೊಂಡ ನಾಯಕರು, ಸೈನ್ಯ ಕಳುಹಿಸಿ, ಎರಡು ರಾಜರನ್ನು ಸೋಲಿಸಿದ್ದರು. ಕುಂಬಳೆಯರಸರು ಕೈದಿಯಾಗಿ ತಮ್ಮ ಸೆರೆಮನೆಯಲ್ಲಿಯೇ ಕೊಳೆಯು ತ್ತಿದ್ದರು. ಆಗ ಅವರ ಕಾವಲುಗಾರರು ಅವರ ಮೇಲೆ ಕನಿಕರಿಸಿ, ಅವರಿಗೆ ಹೆಣ್ಣುವೇಷ ತೊಡಿಸಿ ಸೆರೆಮನೆಯಿಂದ ಪಾರುಮಾಡಿದ್ದರು.

ಪರಾಕ್ರಮಿಯಾಗಿದ್ದ ಆ ಅರಸು ಪ್ರಾಣರಕ್ಷಣೆಗಾಗಿ ಹೆಣ್ಣುವೇಷ ಧರಿಸಿದುದೇ ಅವರ ವಂಶಕ್ಕೆ ಒಂದು ಶಾಪವಾಗಿ ಪರಿಣಮಿಸಿತೇನೋ! ಅವರ ಅನಂತರ ಪಟ್ಟಕ್ಕೆ ಬಂದ ಅವರ ಮಗ— ಈಗಿನ ಅರಸು ಯುದ್ಧದ ಹೆಸರು ಕೇಳಿದರೇ ನಡುಗುತ್ತಿದ್ದರು. ಅಂತಹವರಿಂದ ಈ ಗಂಡಾಂತರ ಹೇಗೆ ನಿವಾರಿಸಲ್ಪಡಬೇಕು?

ಅರಸು, ತನ್ನ ಐಶ್ವರ್ಯವನ್ನೂ ಪ್ರಾಣವನ್ನೂ ರಕ್ಷಿಸುವುದಕ್ಕಾಗಿ, ಎಲ್ಲಾದರೂ ಓಡಿಹೋಗಿ ಅಡಗಿಕೊಳ್ಳಬೇಕೆಂದು ನಿಶ್ಚಯಿಸಿಕೊಂಡು ಗಡಿ ಬಿಡಿಯಿಂದ ತನ್ನ ಸೇವಕರೊಡನೆ ತನ್ನ ಅರಮನೆಯತ್ತ ನಡೆದರು.

ಈ ಭಯಂಕರವಾದ ವಾರ್ತೆಯನ್ನು ತಂದ ಸೈನಿಕರು ತನಗೆ ಅರಸರ ಅಪ್ಪಣೆಯೇನೆಂದು ಅರಿಯದೆ ಅಲ್ಲಿಯೇ ನಿಂತಿದ್ದನು. ಅವನ ಕುದುರೆಯು ತನಗೇನಪ್ಪಣೆ ಎಂದು ಪ್ರಶ್ನಿಸುವಂತೆ ಅವನನ್ನೇ ನೋಡುತ್ತಾ ಒಳಿಯಲ್ಲೇ ನಿಂತಿತ್ತು.

ಕವಿ ಪಾರ್ತಿಸುಬ್ಬನ ಅಂತರಂಗ ಬಿರುಗಾಳಿಯೆದ್ದ ಕಡಲಿನಂತೆ ಕಲಕಿ ಹೋಗಿತ್ತು. ತನ್ನ ಆಟ ಆಗದುದರಿಂದಲೂ ಹೆಚ್ಚಿನ ದುಃಖವು, ಈ ವಿಚಿತ್ರ ದೈವವಾಟದಿಂದ ಪಾರಾಗುವುದು ಹೇಗೆಂಬ ಯೋಚನೆಯಿಂದ ಅವನ ಅಂತರಂಗದಲ್ಲಿ ಮೂಡಿತ್ತು.

ಈ ಸಂದರ್ಭದಲ್ಲಿ ಬೇರೆ ದಾರಿಗಾಣದ ಅವನ ಪರಿಪಕ್ವವಾದ ಕವಿ ಹೃದಯವು ತನ್ನ ಇಷ್ಟದೈವವಾದ ಶ್ರೀ ಗೋಪಾಲಕೃಷ್ಣನನ್ನು 'ತ್ರಾಹಿ' ಎಂದು ಮೊರೆಯಿಡುತ್ತಿತ್ತು.

ಆ ಒಂದು ಕ್ಷಣದಲ್ಲಿ—

ಅವರ ಮೇಲೆ ಕವಿದಿದ್ದ ದುಃಖದ ಕಪ್ಪು ಮೋಡದಲ್ಲಿ ಕಣ್ಣು ಕೋರೈಸುವ ಮಿಂಚೊಂದು ಹೊಳೆಯಿತು. ಸಿಡಿಲುಮರಿ ಕೆಂಗಣ್ಣ ನಾಯಕ ಎಲ್ಲಿಂದಲೋ ಹಾರಿ ಬಂದು ಗುರುವಿನ ಪಾದಗಳಿಗೆರಗಿ ಹೇಳಿದನು:

"ಗುರುವೇ, ನನ್ನನ್ನು ಆಶೀರ್ವದಿಸಿರಿ. ಈ ಶಿಷ್ಯನು ತಮ್ಮ ಅನುಗ್ರಹದಿಂದ ಒಮ್ಮೆ ಮರೆತ ವಿದ್ಯೆಯನ್ನು ಲೋಕಕಲ್ಯಾಣಾರ್ಥವಾಗಿ ಪುನಃ ನೆನಪಿಗೆ ತರಲು ಬಯಸುವನು."

ಪಾರ್ಶಿಸುಬ್ಬನಿಗೆ, ಅಚ್ಚರಿಯಾಯಿತು. ಸಿಡಿಲುಮರಿಯನ್ನು ಹಿಡಿದೆತ್ತಿ ತಬ್ಬಿಕೊಂಡು ಅರ್ಥವಾಗದವನಂತೆ ತೊದಲಿದನು:

"ಅಂದರೇನು ಸಿಡಿಲುಮರೀ, ಯುದ್ಧಕ್ಕೆ ಹೊರಡುವಿಯಾ?"

"ಹೌದು—ಪ್ರೀತಿಯಿಂದ ತಾವಿತ್ತ ಸಿಡಿಲು ಮರಿಯೆಂಬ ಬಿರುದನ್ನು ಸಾರ್ಥಕಗೊಳಿಸಲು ಬಯಸುವೆ."

ಎನ್ನುತ್ತಾ ಬಾಗಿ ಗುರುವಿನ ಚರಣಧೂಳಿಯನ್ನು ಹಣೆಗಿಟ್ಟುಕೊಂಡು ಮರುಕ್ಷಣದಲ್ಲಿಯೇ ಬಳಿಯಲ್ಲಿದ್ದ ಸೈನಿಕನ ಕುದುರೆಯ ಮೇಲೆ ಟಣ್ಣನೆ ಜಿಗಿದು ಮಿಂಚಿನೋಟದಿಂದ ಮರೆಯಾದನು.

ಎಲ್ಲರೂ ಬೆರಗಾಗಿ ನೋಡುತ್ತಿದ್ದರು. ತಮ್ಮ ಕಿವಿ ಕಣ್ಣುಗಳ ಮೇಲೆ ಎಷ್ಟೆಂದರೂ ಅವರಿಗೆ ನಂಬಿಕೆ ಹುಟ್ಟದೆ ತೊಳಲಾಟದಲ್ಲಿ ಸಿಲುಕಿದ್ದರು.

ಕ್ಷಣಹೊತ್ತು ಕಳೆದಾಗ ಪಾರ್ಶಿಸುಬ್ಬನಿಗೆ ನಡೆದುದೇನೆಂಬುದರ ಅರಿವು ಬಂತು. ಆದ ಪ್ರಮಾದಕ್ಕಾಗಿ ಅವನ ಮನಸ್ಸು ಮಿಡುಕಿತು. ಇನ್ನೂರು ಮಂದಿ ಭಯಂಕರರಾದ ಫಿರಂಗಿ ಸೈನಿಕರನ್ನು ಇದಿರಿಸಲು ಏಕಾಂಗಿಯಾದ ಸಿಡಿಲುಮರಿಯಿಂದ ಸಾಧ್ಯವೇ? ತಿಳಿದೂ ತಿಳಿದೂ ಪತಂಗವು ಅಗ್ನಿಕುಂಡಕ್ಕೆ ಹಾರುತ್ತಿದೆಯೆಂದು ಹೆದರಿದನು. ಸುತ್ತಲೂ ತನ್ನಂತೆಯೇ ನಿಬ್ಬೆರಗಾಗಿ ನಿಂತಿದ್ದ ಬಣ್ಣದ ಗೋಪಣ್ಣ, ರಾಮಚಂದ್ರರನ್ನು ಉದ್ದೇಶಿಸಿ ನುಡಿದನು:

"ಏನು ನೋಡುತ್ತೀರಿ? ಸಿಡಿಲು ಮರಿಯನ್ನು ಸಾವಿನ ಬಾಯಿಗೆ ಬಿಡುವಿರಾ?"

ಗುರುವಿನ ಮಾತು ಶಿಷ್ಯರಿಗೆ ಅರ್ಥವಾಯಿತು. ಬಣ್ಣದ ಗೋಪಣ್ಣ ರಾಮಚಂದ್ರ, ಮತ್ತು ಅವರನ್ನು ಅನುಸರಿಸಿ ಇನ್ನೂ ಹಲವು ವೀರರು ಸಿಡಿಲುಮರಿ ನೆಗೆದೆಡೆಗೆ ಧಾವಿಸಿದರು.

ಪಾರ್ತಿಸುಬ್ಬ ಆಹತ ಭಾವನೆಯಿಂದ ಬೆಂದು, ಬಸವಳಿದು, ಕುಸಿದು ಕುಳಿತನು. ಏನೋ ಒಂದು ಪ್ರತ್ಯಾಶೆ ಅವನ ಕಣ್ಣುಗಳನ್ನು ಸಿಡಿಲುಮರಿ ಮರೆಯಾದ ದಿಕ್ಕಿಗೆ ತಿರುಗಿಸುತ್ತಿದ್ದಿತು.....

*    *    *    *

ಪಾರ್ತಿಸುಬ್ಬನ ಯಕ್ಷಗಾನ ಮಂಡಲಿ ಚದರಿತ್ತು. ನಟರು, ಹಿಮ್ಮೇಳದವರು, ಪಾರ್ತಿಸುಬ್ಬನ ಅಪ್ಪಣೆಯನ್ನು ಪಡೆಯಲು ಅವಕಾಶವಿಲ್ಲದೆ, ತಮ್ಮ ತಮ್ಮ ಊರುಗಳತ್ತ ಧಾವಿಸಿದ್ದರು. ಆ ವರ್ಷ ದೇವರ ಸೇವೆ-ಗೆಜ್ಜೆಪೂಜೆ ನಡೆಯದೆ ವೇಳೆ ಚದರಿತ್ತು. ಈ ಕೊರಗು ಪಾರ್ತಿಸುಬ್ಬನ ಭಕ್ತಿ ಭರಿತವಾದ ಕವಿಹೃದಯವನ್ನು ಕೊರೆಯುತ್ತಿತ್ತು.

ಮರುದಿನ ಸಂಜೆಯ ಹೊತ್ತು. ಕುಂಬಳೆಯ ಶ್ರೀ ಗೋಪಾಲಕೃಷ್ಣ ದೇವಾಲಯದ ಮುಂದಿನ ಮಂಟಪದಲ್ಲಿ ಪಾರ್ತಿಸುಬ್ಬ ಯೋಚನಾಮಗ್ನನಾಗಿ ಕುಳಿತಿದ್ದನು. ತನ್ನ ಪ್ರೀತಿಯ ಸಿಡಿಲುಮರಿ, ಅವನನ್ನು ಹಿಂಬಾಲಿಸಿ ತೆರಳಿದ ಬಣ್ಣದ ಗೋಪಣ್ಣ, ರಾಮಚಂದ್ರರ ಸುದ್ದಿ ತಿಳಿಯದೆ ಅವನ ಕರುಳು ಕಳವಳದ ಪಂಜರವಾಗಿತ್ತು.........

ಆದರೆ, ಒಂದು ಅಚ್ಚರಿಯ ಸಂಗತಿ. ಯಾವುದಕ್ಕೆ ಹೆದರಿ ನಿನ್ನೆಯ ಆಟ ಅರ್ಧದಲ್ಲೇ ಕಡಿದಿತ್ತೋ, ಅಂತಹ ಸಿಡಿಲಿನಂತಹ ಸುದ್ದಿ, ಸೈನಿಕನು ಅರುಹಿದುದು—ಅದರಂತೆ ಫಿರಂಗಿಯವರ ಸೈನ್ಯ ಕುಂಬಳೆಯತ್ತ ಬರಲೇ ಇಲ್ಲ; ಎಲ್ಲರೂ ಹೆದರಿದ್ದಂತೆ, ಬಂದು ಕುಂಬಳೆಯ ಕೋಟೆಯನ್ನು ಕೆಡವಿ, ಅರಸರ ವಂಶವನ್ನು ತರಿದು, ಬೊಕ್ಕಸವನ್ನು ಸುಲಿದು, ಊರಿಗೆ ಕೊಳ್ಳಿಯಿಟ್ಟು, ಅನಾಹುತ ಮಾಡಲೇ ಇಲ್ಲ......ಹಾಗಾದರೆ, ಆ ಸೈನಿಕನು ಹೇಳಿದುದು ಸುಳ್ಳೇ?—ಪಾರ್ತಿಸುಬ್ಬ ವಿಚಾರಿಸುತ್ತಿದ್ದನು......

ಸೂರ್ಯನು ಕೆಂಪಿನ ಗೋಳವಾಗಿ ಪಡುಕಡಲಿಗೆ ಉರುಳುವುದರಲ್ಲಿದ್ದನು. ಎಲ್ಲೆಲ್ಲೂ ಶ್ಮಶಾನ ಶಾಂತಿ ಒಡಮೂಡಿತ್ತು. ಹಕ್ಕಿಗಳ ಸುಳಿವೂ ಇರಲಿಲ್ಲ. ಆ ರುದ್ರ ಸಂಧ್ಯೆಯಲ್ಲಿ ಇಬ್ಬರು ಯುವಕರು ಯಾವುದೋ ಭಾರವಾದ ವಸ್ತುವನ್ನು ಒಂದು ಬಿದಿರಗಳಕ್ಕೆ ಕಟ್ಟಿ ಹೆಗಲಲ್ಲಿಟ್ಟುಕೊಂಡು, ದೇವಾಲಯದತ್ತ ಬಂದರು. ದೇವಾಲಯದ ಮುಂಬಾಗಿಲಿನಲ್ಲಿ ಅದನ್ನಿಳಿಸಿ, ಅವರಲ್ಲೊಬ್ಬನು ಒಳ ನಡೆದನು.

"ಗುರುಗಳೇ, ತಮ್ಮ ಸಿಡಿಲುಮರಿಯನ್ನು ಕರೆತಂದಿರುವೆವು."

—ಎಂದ ವ್ಯಕ್ತಿಗಳು. ವಿನಯವು ಅವರ ಮಿಡುಪಾತಿನಲ್ಲಿ ತುಂಬಿ ತುಳುಕುತ್ತಿತ್ತು.

"ಯಾದು ಗೋಪಣ್ಣನೇ ?—ಏನು ಸಿಡಿಲುಮರಿ ಬಂದನೇ?"

ಪಾರ್ತಿಸುಬ್ಬ ಬಹಿರ್ಮುಖನಾಗಿ ಆಶ್ಚರ್ಯದಿಂದ ಪ್ರಶ್ನಿಸಿದನು.

"ಹೌದು ಗುರುದೇವ. ಆದರೆ....."

ಎಂದು ಗೋಪಣ್ಣ ಏನನ್ನೋ ಹೇಳಲು ಬಾಯ್ತೆರೆದನು. ಆದರೆ ಅವನ ಬಾಯಿಯಿಂದ ಮಾತು ಹೊರಹೊರಡಲಿಲ್ಲ. ನಾಲಿಗೆ ಕೊರಡಾಗಿತ್ತು.

ಪಾರ್ತಿಸುಬ್ಬ ಗೋಪಣ್ಣನ ಮಾತನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲ. ತನ್ನ ಸಿಡಿಲು ಮರಿಯನ್ನು ಕಾಣುವ ಉತ್ಸಾಹದಲ್ಲಿ ಆಗಲೇ ಅವನು ದೇವಾಲಯದಿಂದ ಹೊರಕ್ಕೆ ಜಿಗಿದಿದ್ದನು. ತನ್ನ ಶಿಷ್ಯನನ್ನು ಕಾಣುವ ಉತ್ಸಾಹ ಅವನ ಚಿಂತೆಯನ್ನು ಹೊಡೆದೋಡಿಸಿತ್ತು.

ಆದರೆ...............

ವಿಧಿಯಾಟವು ಬೇರೊಂದು ತೆರನಾಗಿತ್ತು.

ರಾಮಚಂದ್ರ, ತಾನು ಇಳುಹಿದ ಸಿಡಿಲು ಮರಿಯ ಶವದ ಬಡದಲ್ಲಿ ಕುಳಿತು ಅಳುತ್ತಿದ್ದನು. ಪಾರ್ತಿಸುಬ್ಬನು ಬಂದುದನ್ನು ಕಂಡೊಡನೆಯೇ ಅವನ ದುಃಖವು ಉಮ್ಮಳಿಸಿ ಬಂತು. "ಗುರುದೇವ"......ಎನ್ನುತ್ತಾ ಗುರುವಿನ ಕಾಲನ್ನು ತಬ್ಬಿಕೊಂಡನು.

ಪಾರ್ತಿಸುಬ್ಬನಿಗೆ ನಡೆದುದೇನೆಂದು ತಿಳಿಯಿತು. "ಸಿಡಿಲು ಮರೀ ......" ಎನ್ನುತ್ತಾ ಕೆಂಗಣ್ಣ ನಾಯಕನ ದೇಹವನ್ನು ಅಪ್ಪಿಕೊಂಡನು. ಪ್ರಾಯವಿರಿರಿದ ಮೇಲೆ ಅದುತನಕ ಅತ್ತು ಅರಿಯದ ಅವನ ಕಣ್ಣುಗಳಿಂದ ಅಶ್ರುಧಾರೆ ಸಂತತವಾಗಿ ಸುರಿಯ ತೊಡಗಿತು.......

ಬಣ್ಣದ ಗೋಪಣ್ಣ ಪಾರ್ತಿಸುಬ್ಬನ ಹಿಂದಿನಿಂದಲೇ ಬಂದು ನಿಂತಿದ್ದನು. ಅತನು, ಮೆಲ್ಲಮೆಲ್ಲನೆ ನಡೆದಿದ್ದ ಕತೆಯನ್ನು ಹೇಳತೊಡಗಿದನು:

"ಗುರುದೇವ, ನಮ್ಮ ಸಿಡಿಲುಮರಿ ಹಾಗೆಯೇ ಸಾಯಲಿಲ್ಲ. ತಾನು ಕೊನೆಯ ಬಾರಿ ಆಡಿದ ಮಾತನ್ನು ಸಾರ್ಥಕಗೊಳಿಸಿದ್ದಾನೆ. ಸಿಡಿಲು ಮರಿಯಾಗಿಯೇ ಇನ್ನೂರು ಮಂದಿ ಫಿರಂಗಿ ಸೈನಿಕರನ್ನು ಕೊಂದು ಕೆಡಹಿದ್ದಾನೆ."

ಪಾರ್ತಿಸುಬ್ಬನಿಗೆ ಅಚ್ಚರಿಯಾಯಿತು. ಗದ್ಗದಕಂಠದಲ್ಲಿ ಅಭಿಮಾನ ತುಂಬಿಕೊಂಡು ಕೇಳಿದನು:

"ಏಕಾಂಗಿಯಾಗಿ?"

"ಹೌದು — ಏಕಾಂಗಿಯಾಗಿಯೇ. ಹೇಗೆಂಬುದರ ವಿವರವು ಆರಿಗೂ ಅರಿಯದು. ಬಹುಶಃ ಕಾಡುದಾರಿಯಲ್ಲಿ ಸೈನಿಕರನ್ನು ದಾರಿತಪ್ಪಿಸಿ—ರಾತ್ರಿ ಕಾಲವಲ್ಲವೇ? - ತನ್ನೂರಿಗೆ ಕೊಂಡೊಯ್ದು ತನ್ನ ಗೆಳೆಯರ ಸಹಾಯದಿಂದ ಸದೆಬಡೆದನೆಂದು ತಿಳಿಯುತ್ತದೆ. ಕೊನೆಯ ಗಳಿಗೆಯಲ್ಲಿ ಫಿರಂಗಿಯವರ ಗುಂಡೊಂದು ಸಿಡಿಲುಮರಿಯ ಪ್ರಾಣವನ್ನು ಕುಡಿಯಿತು..... ಅವನ ಊರು ರಣರಂಗವಾಗಿ ರಕ್ತದ ನದಿಯಲ್ಲಿ ಮುಳುಗಿದೆ. ಅಲ್ಲಿ ಹೋಗಿ ಹುಡುಕಿ, ಈ ದೇಹವನ್ನು ತಂದೆವು..."

ಗೋಪಣ್ಣನ ಮಾತು ತಡೆಯಿತು. ಅಲುಗಾಡದ ಎಲ್ಲರ ದೇಹಗಳೂ ಅಭಿಮಾನದ ಉಸಿರನ್ನು ಸೇದುತ್ತಿದ್ದುವು.

* * * *

ಚಿತೆ ಉರಿಯಿತು; ಎಲ್ಲರ ಎದೆಯನ್ನೂ ಉರಿಸುತ್ತಿದ್ದ ಚಿಂತೆಯ ದಾವಾಗ್ನಿಯೊಡನೆ, ಪಾರ್ಶಿಸುಬ್ಬ ನಿನ್ನೆಯ ರಾತ್ರಿ ಪೂರೈಸದಿದ್ದ ಗೆಜ್ಜೆ ಪೂಜೆಯನ್ನು ಇಂದು ಪೂರೈಸಿದ್ದನು: ಗೆಜ್ಜೆಯನ್ನು ಪೂಜಿಸಿ, ಸಿಡಿಲು ಮರಿಯ ಕಾಲುಗಳಿಗೆ ಕಟ್ಟಿ ಹಾಗೆಯೇ ಅಭಿಮಾನದಿಂದ, ಭಕ್ತಿಯಿಂದ ತಾನೇ ಹೊತ್ತು ಚಿತೆಯೇರಿಸಿದ್ದನು.

ಪಡುವಣ ಬೆಂಕಿಯ ಗೋಳ ಆರಿತ್ತು. ಎಲ್ಲೆಲ್ಲೂ ಚಿಂತೆಯು ಕಪ್ಪಾಗಿ ದಟ್ಟವಾಗಿ, ಆವರಿಸಿತ್ತು. ಅದನ್ನು ಸಿಡಿಲುಮರಿಯ ಚಿತೆಯು ಉರಿಸುತ್ತಿದ್ದ ವೀರಾವೇಶದ ಬೆಳಕು ಬೆಳಗಿಸಿತ್ತು. ಅದನ್ನು ದಿಟ್ಟಿಸಿ ನೋಡುತ್ತಾ, ಪಾರ್ಶಿ ಸುಬ್ಬನ ಮನಸ್ಸಿನಲ್ಲಿ ತನ್ನ ಮೆಚ್ಚಿನ ಗೀತೆಯು ಮೂಡಿ ಬಂತು:

"ರಾಮನಾಣತಿಯಂತೆ ಸಿಡಿಲಾಮರಿಯಂಗದನು......"

ಎಂದೂ ಕವಿಗಳಲ್ಲದ ಬಣ್ಣದ ಗೋಪಣ್ಣ ರಾಮಚಂದ್ರರ ಮನಸ್ಸಿನಲ್ಲೂ ಆ ಕವಿತೆಯ ಪ್ರತಿಧ್ವನಿ ಸುಳಿಯುತ್ತಿತ್ತು:

"ಗುರುವಿನಾಣತಿಯಂತೆ ಸಿಡಿಲುಮರಿ ಕೆಂಗಣನು.. ..."

ಮೆಲ್ಲಮೆಲ್ಲನೆ ಬೆಳಕು ಮೂಡಿ ಜಗತ್ತನ್ನು ಬೆಳಗಿದಾಗ, ಸಿಡಿಲು ಮರಿಯ ಚಿತೆಯು ಪವಿತ್ರ ಜ್ಯೋತಿಯು ಮೆಲ್ಲಮೆಲ್ಲನೆ ವಿಶ್ವಜ್ಯೋತಿಯಲ್ಲಿ ವಿಲೀನವಾಯಿತು.



# ಕ್ರೋಧ ಆರಿತು; ಪ್ರೇಮ ಉರಿಯಿತು.....

## ೧

ಎದುರಿಗೆ ಅಜಯಾ ನದಿಯು ಪ್ರಶಾಂತವಾಗಿ ಹರಿಯುತ್ತಿತ್ತು. ಪಶ್ಚಿಮದ ಸೂರ್ಯನ ಚಿನ್ನದ ಕಿರಣಗಳು ನದಿಯ ನೀರಿನಲ್ಲಿ ಪ್ರತಿಫಲಿಸುತ್ತಿದ್ದುವು. ನದಿಯ ಸ್ನಾನಘಟ್ಟದ ಶಿಲಾಸೋಪಾನಗಳಲ್ಲಿ, ಯುವರಾಜ ಲಕ್ಷ್ಮಣಸೇನನು ಕೈಮೇಲೆ ಕದಪನ್ನಿರಿಸಿ, ನದೀಜಾಳವನ್ನು ದಿಟ್ಟಿಸುತ್ತಾ ಚಿಂತಿಸುತ್ತಿದ್ದನು.

ನದಿಯನೀರಿನ ನಿರ್ಮಲ ವಕ್ಷದೊಳಗೆ ಅವನ ಮುಗ್ಧ ಕಟಾಕ್ಷವು ಇಣಿಕಿದಂತೆ, ಮರಳಿ ಮರಳಿ ಅದೇ ಯೋಚನೆ ಅವನಿಗೆ ಬರುತ್ತಿತ್ತು:

"ತಣ್ಣಗಾಗಿರುವುದು ನೀರಿನ ಸ್ವಭಾವ. ಸಹಜವಾಗಿಯೇ ನಿರ್ಮಲವಾದುದದು. ಅಂಥ ಜಲದ ಸ್ಪರ್ಶಮಾತ್ರದಿಂದ ಸಕಲ ವಸ್ತುಗಳೂ ನಿರ್ಮಲವಾಗುವುವು. ಸಕಲ ಜೀವಿಗಳಿಗೂ ಜೀವನ ಸ್ವರೂಪವಾದ ಮತ್ತು ನಿರ್ಮಲವಾದ ಇಂತಹ ಜಲವೇ ಕೊಳಕು ದಾರಿಯಲ್ಲಿ ಹರಿದರೆ?........."

"ಹರಿದರೆ ಅದೂ ಕೊಳಕಾಗುವುದು. ಅನಂತರ ಅದರ ಪಾವಿತ್ರ್ಯ ಮತ್ತು ನೈರ್ಮಲ್ಯ ಉಳಿಯಲಾರದು."

"ಹಾಗೆ ಹರಿಯತೊಡಗಿದರೆ ಅದನ್ನು ತಡೆಯುವುದೂ ಸಾಧ್ಯವಿಲ್ಲ..."

"ಸಾಧ್ಯವಿಲ್ಲವೇ?—ಇಲ್ಲವೇ?"

ನದಿಜಲದ ಸಾದೃಶ್ಯದಿಂದ ತಟ್ಟನೆ ಅವನ ಯೋಚನೆ ತನ್ನ ತಂದೆಯ ಬಗೆಗೆ ತಿರುಗುವುದು. ತಂದೆಯಾದ ಬಲ್ಲಾಳಸೇನ! ಅವನು ಎಷ್ಟು ವಿಕ್ರಮಿ; ಎಷ್ಟು ಪ್ರತಾಪಿ! ಓಹ್! ಇನ್ನೆಲ್ಲಿ ಅವನ ವಿಕ್ರಮ ಪ್ರತಾಪ!

ರಾಜಧಾನಿ ನದಿಯಾ ನಗರ!

ಬೆಳ್ಳುಗಿಲು ಸೂರ್ಯನ ಕಿರಣದ ಸಂಗದಿಂದ ಥಳಥಳನೆ ಹೊಳೆಯುತ್ತದೆ. ಆದರೆ, ಕಗ್ಗತ್ತಲೆಯ ಸಹವಾಸವಾದರೆ!

—ಆಗೆಲ್ಲಿ ಅದರ ಪ್ರಕಾಶ?

ಹೀಗೆಯೇ ರಾಜಧಾನಿ ನದಿಯಾ ನಗರ ಮತ್ತು ವೀರಭೂಮಿಯ ಪ್ರಜಾ ಪರಿವಾರ. ದುಸ್ಸಂಗದಿಂದ ದುರ್ನೀತಿಗಿಳಿದ ಅರಸನಿಂದಾಗಿ ಎಷ್ಟು ಪ್ರಕಾಶಹೀನವಿಂದು — ಎಷ್ಟು ಸತ್ವಹೀನ!

ಓ! ರಾಜಶೇಖರನಾದ ಬಲ್ಲಾಳಸೇನ! ಪೂಜ್ಯ ತಂದೆಯೇ! ಎಲ್ಲಿ ನಿನ್ನ ಕೀರ್ತಿ, ಗುಣ, ಜ್ಞಾನ, ಔದಾರ್ಯ? ದುಸ್ಸಂಗ ನಿನಗೂ ತಗಲಿತೇ?

ನಿನ್ನ ಕೀರ್ತಿ ಜ್ಞಾನಗಳನ್ನೂ ಮಂತ್ರಿ ಪ್ರಜಾ ಪರಿವಾರದ ಮಾತನ್ನೂ ಕಡೆಗಣಿಸಿ ಇಂದು.........

ಹೀನ ವಿದ್ಯೆಯಿಂದ ತಾಂತ್ರಿಕ ಸಾಧನೆಗೆ ತೊಡಗಿರುವೆಯಲ್ಲ! ಆ! ಇದು ಯಾವ ಕಾಪಾಳಿಕನ ದುಸ್ಸಂಗದ ಫಲ!

ಅಲ್ಲದೆ — ಅಲ್ಲದೆ.........

ನಿನ್ನ ಕೀರ್ತಿವೆತ್ತ ಕ್ಷಾತ್ರತೇಜವನ್ನೂ ಮರೆತು, ಆ ನೆನಪನ್ನೂ ಸುಟ್ಟು ರುಹಿ, — ಅಯ್ಯೋ! ಆ ನೀಚ ಜಾತಿಯ ಅವಳನ್ನು.........ಪದ್ಮಿನಿಯನ್ನು ಪರಿಗ್ರಹಿಸಿದೆಯಾ?

ಎಲ್ಲಿ ನಿನ್ನ ಧರ್ಮ ಬುದ್ಧಿ, ಜ್ಞಾನ......? ನೀನು ರಾಜ!

"ಸಕಲ ಜೀವಿಗಳಿಗೂ ಜೀವನ ಸ್ವರೂಪವಾದ ಇಂತಹ ಜಲವೇ ಕೊಳಕು ದಾರಿಯಲ್ಲಿ ಹರಿದರೆ ...ಅದೂ ಕೊಳಕಾಗುವುದು....

"ಅದನ್ನು ತಡೆಗಟ್ಟುವುದು ಸಾಧ್ಯವಿಲ್ಲ......"

ಯುವರಾಜನ ಚಿಂತೆಯು ಕಾವಿಗೆ ಶೀತಲವಾದ ನದಿಯ ಜಲವೂ ಕುದಿದು ಜುಳುಜುಳನೆ ಹರಿಯಿತು. ಮಂದಮಾರುತವೂ ಅವನ ಚಿಂತೆಯ ಬಳಿಗೆ ಸಿಲುಕಿ ಬಿಸಿಯೇರಿ ಸುಯ್ಯೆಂದು ಮೆಲ್ಲಮೆಲ್ಲನೆ ಸಂಚರಿಸಿತು. ಮುಂಜಾನೆ ಅರಳಿ, ಇದುವರೆಗೂ ಮುಗುಳ್ನಗುತ್ತಾ, ಜಗತ್ತಿಗೆ ಪರಿಮಳದ ಬಾಗಿನವನ್ನು ಹೊತ್ತು ನಿಂತಿದ್ದ ಕುಸುಮಗಳು ಬಾಡಿ ಕೆಳಕ್ಕುರುಳಿದುವು....

ಸೂರ್ಯನೂ ಪಡುವಣೆಡೆಯಲ್ಲಿ ಕಣ್ಮರೆಯಾದನು......

ಯುವರಾಜನು ಕುಳಿತ ಕಲ್ಲಿನ ಪಾವಟಿಗೆಗಳ ಹಿಂದೆ, ಕುಸುಮಿಸಿದ ಮಲ್ಲಿಗೆ ಬಳ್ಳಿಗಳ ಮಧ್ಯದಲ್ಲಿ, ಮೋಡದ ಮರೆಯಲ್ಲಿ ನಿಂತ ಚಂದ್ರನಂತೆ, ಶಾಂತ ಸುಂದರವಾಗಿದ್ದ ರಾಧಾ — ಮಾಧವ ಮಂದಿರದಲ್ಲಿ ಜ್ಯೋತಿ ಬೆಳಗಿತು.

— ಪ್ರೇಮ ಜ್ಯೋತಿ!

ಚಿರಪರಿಚಿತವಾದ ಇನಿದನಿಯಿಂದ ಕವಿ ಜಯದೇವನ ಪ್ರೇಮಾರಾಧನೆಯ ಪ್ರೇಮ ಸಂಗೀತ ಕೇಳಬಂದಿತು:

"ಕಿಂಕರಿಷ್ಯತಿ ಕಿಂವದಿಷ್ಯತಿ
ಸಾಚಿರಂ ವಿರಹೇಣ ।
ಕಿಂ ಜನೇನ ಧನೇನ ಕಿಂ ಮಮ
ಜೀವಿತೇನ ಗೃಹೇಣ ॥
ಚಿಂತಯಾಮಿ ತದಾನನಂ ಕುಟಿ–
ಲಭ್ರೂ ರೋಷ ಭರೇಣ ।
ಶೋಣ ಪದ್ಮಮಿವೋಪರಿಭ್ರಮಾ–
ತಾಕುಲಂ ಭ್ರಮರೇಣ ॥......"

ಪ್ರೇಮ ಶೃಂಗಾರ ಕವಿ ಚಕ್ರವರ್ತಿ ಜಯದೇವನು ಎಂದಿನಂತೆ ರಾಧಾ – ಮಾಧವರೆದುರಿಗೆ, ಪ್ರೇಮಗೀತೆಗಳಾದ ತನ್ನ ಅಷ್ಟಪದಿಗಳನ್ನು ಪ್ರೇಮಾವೇಶಭರಿತನಾಗಿ ಹಾಡುತ್ತಿದ್ದನು.

ರಾಧೆಯ ವಿರಹದಿಂದ ಮಾಧವನು ಚಿಂತಿಸುತ್ತಿದ್ದನು:

"ವಿರಹಿತಳಾದ ರಾಧೆಯು ವಿರಹ ದುಃಖದಿಂದ ಏನು ಮಾಡುತ್ತಿರುವಳೋ; ಏನು ಆಡುತ್ತಿರುವಳೋ? ಆ ನನ್ನ ಜೀವಿತರಸವಾಹಿನಿಯಾದ ರಾಧೆಯಿಲ್ಲದ ಮೇಲೆ ಬಂಧುಬಳಗವಿದ್ದರೇನು? ಧನವಿದ್ದರೇನು? ಮನೆಯಿದ್ದರೇನು?— ನನ್ನ ಜೀವಿತದಿಂದಲೇ ಏನು ಪ್ರಯೋಜನ......?

"ಪ್ರಣಯ ಕೋಪದಿಂದ ಗಂಟಿಕ್ಕಿದ ಹುಬ್ಬುಗಳುಳ್ಳ ಅವಳ ಮುಖವು ನನಗೀಗ ನೆನಪಾಗುತ್ತಿದೆ ದುಂಬಿದಳಗಳಿಂದ ಮುತ್ತಲ್ಪಟ್ಟ ಆ ಕೆಂದಾವರೆ......"

ಜಯದೇವನ ಪ್ರೇಮಗೀತೆ ಮಾಧವ ಮೂರ್ತಿಯ ತುಟಿಗಳೆಡೆಯಿಂದ ಹೊರಟು, ಚಿನ್ನದ ಕೊಳಲಿನೊಳಗೆ ಸಂಚರಿಸಿ ಇಂಚರವಾಗಿ ಪ್ರಸರಿತವಾಗುವಂತೆ ತೋರುತ್ತಿತ್ತು. ರಾಧೆಯ ಮೂರ್ತಿಯ ಮುಖದಲ್ಲರಳಿದ ಮುಗುಳ್ನಗೆಯಂತೆ ವಿಕಸಿಸಿದ್ದ ಸುತ್ತಣ ಮಲ್ಲಿಕಾವನದ ಮುಗುಳ್ನಗೆಯರಳುಗಳು ಅದಕ್ಕೆ ಮುಗ್ಧವಾಗಿ ಪ್ರೇಮ ಪರಿಮಳದ ನಿಶ್ವಾಸವನ್ನು ಬಿಡುತ್ತಿದ್ದುವು. ಪ್ರಕೃತಿಯೇ ರಾಧಾ ಮಾಧವರ ವಿರಹ ಗೀತೆಯಲ್ಲಿ ತನ್ಮಯವಾಗಿತ್ತು....

ಜುಳುಜುಳನೆ ಹರಿಯುವ ಅಜಯಾ ನದಿಯ ನಿರ್ಮಲ ಜಲವೂ....

"ಛೀ! ಎಂತಹ ಮೂಢನಿವನು! ಹೆಣ್ಣಿನ ವಿರಹಕ್ಕಾಗಿ ಹಾಡುತ್ತಾ, ಪ್ರೇಮಕ್ಕಾಗಿ ಗೀತೆಗಳನ್ನು ರಚಿಸುತ್ತಾ, ರಾಸಕ್ರೀಡೆಗಾಗಿ ನರ್ತಿಸುತ್ತಾ, ಆಯುಷ್ಯವನ್ನೇ ಕಳೆಯುವ ಈ ಜಯದೇವ! ಎಂತಹ ಹುಚ್ಚನಿವನು!..."

— ಎಂದು ತೋರಿತು ಲಕ್ಷ್ಮಣಸೇನನಿಗೆ.

ಪ್ರತಿದಿನವೂ ಜಯದೇವನ ಪ್ರೇಮಗೀತೆ ಕಿವಿಗೆ ಬೀಳುತ್ತಲೂ ಹಾಗೆಯೇ ಎನಿಸುವುದು ಅವನಿಗೆ.

ಅದನ್ನು ಕೇಳಲಾರದೆ ಪ್ರಯತ್ನಪೂರ್ವಕವಾಗಿ ಅಲ್ಲಿಂದೆದ್ದು ನಡೆದನು ಲಕ್ಷ್ಮಣಸೇನ. ಆ ದಾರಿಯಾಗಿ ರಾಧಾ—ಮಾಧವ ಮಂದಿರವನ್ನು ದಾಟುವಾಗ, ಹಠಾತ್ತಾಗಿ ಅವನ ದೃಷ್ಟಿಗಳು ಮಂದಿರದೊಳಕ್ಕೆ ನುಗ್ಗಿದುವು:

ಜಯದೇವನು ತನ್ಮಯನಾಗಿ ಪ್ರೇಮ—ಸಂಗೀತ ಸಮಾಧಿಯಲ್ಲಿ ಹುದುಗಿದ್ದನು. ಗುಡಿಯೊಳಗೆ ಪ್ರೇಮಶಕ್ತಿಯ ಆವಿರ್ಭಾವವಾದಂತೆ ಒಂದು ಮಂಗಳ ಪ್ರಭೆ ಆವರಿಸಿತ್ತು....ಮುಂದೆ ರಾಧಾ—ಮಾಧವ ವಿಗ್ರಹ. ರಾಧೆಯ ಆ ಶೃಂಗಾರ ಹಾಸ; ಮಾಧವನು ವೇಣು......

"ಎಲ್ಲವೂ ಹುಚ್ಚು—ಹುಚ್ಚು......"

—ಎನ್ನುತ್ತಾ ಪ್ರಯತ್ನಪೂರ್ವಕವಾಗಿ ತನ್ನ ದೃಷ್ಟಿಯನ್ನು ಮಾರ್ಗದೆಡೆಗೆ ತಿರುಗಿಸಿಕೊಂಡು ಯುವರಾಜನು ಮುಂದುವರಿದನು.

ಅವನ ಯೋಚನೆಯೂ ಅವನನ್ನು ಹಿಂಬಾಲಿಸಿತು:

"ನದಿಯ ನಿರ್ಮಲ ಜಲವೂ ಅಪವಿತ್ರವಾದರೆ......"

ಅದರ ಹಿಂದಿನಿಂದ ಜಯದೇವನ ಅಮರ ಪ್ರೇಮಗೀತೆ:

"ಕಿಂ ಕರಿಷ್ಯತಿ ಕಿಂ ವದಿಷ್ಯತಿ......"

೨

ಯುವರಾಜನಾದ ಲಕ್ಷ್ಮಣಸೇನನು 'ಸೇನಪಹಾಡ್' ದುರ್ಗದ ತನ್ನ ಅರಮನೆಯಲ್ಲಿ ಕುಳಿತುಕೊಂಡಿದ್ದನು. ಅಧೋಮುಖಿಯಾದ ಅವನ ದೃಷ್ಟಿಗಳು ಅವನೆದುರಿಗೆ ಬಿದ್ದಿದ್ದ ಪತ್ರಗಳ ರಾಶಿಯನ್ನು ದಿಟ್ಟಿಸುತ್ತಿದ್ದುವು.

— ಅದು, ರಾಜನಾದ ಬಲ್ಲಾಳಸೇನ ಮತ್ತು ಯುವರಾಜರೊಳಗೆ ನಡೆದ ಪತ್ರವ್ಯವಹಾರ!

ತಂದೆ ಬಲ್ಲಾಳಸೇನನು ಸೇನವಂಶದ ವಿಖ್ಯಾತ ರಾಜನಾಗಿ, ಮಹಾ ವಿಕ್ರಮಿಯಾಗಿ, ಪ್ರಜಾರಂಜಕನಾಗಿ, ರಾಜ್ಯವಾದ ವೀರಭೂಮಿಯನ್ನು ಪಾಲಿಸಿದ್ದನು ಆದರೆ ಕೊನೆಯ ಗಳಿಗೆಯಾದ ಈ ವೃದ್ಧಾಪ್ಯದಲ್ಲಿ ಯಾರದೋ ದುಸ್ಸಂಗದಿಂದ ತಾಂತ್ರಿಕ ಸಾಧನೆಯಲ್ಲಿ ತೊಡಗಿದ್ದನು. ಮಾತ್ರ ವಲ್ಲದೆ ನೀಚ ಜಾತಿಯ ಪದ್ಮಿನಿಯೆಂಬ ಹೆಣ್ಣನ್ನು ಪರಿಗ್ರಹಿಸಿದ್ದನು. ಇದ ರಿಂದ ಸಿಟ್ಟುಗೊಂಡ ಧರ್ಮಪ್ರಿಯನಾದ ಯುವರಾಜ ಲಕ್ಷ್ಮಣಸೇನನು ತಂದೆಯ ಕೃತಿಯನ್ನು ಖಂಡಿಸಿ ರಾಜಧಾನಿಯಾದ ನದಿಯಾ ನಗರವನ್ನು ತೊರೆದು ಬಂದು; ಅಜಯಾ ನದಿಯ ತೀರದ 'ಕಿಂದುಬಿಲ್ವ' ಗ್ರಾಮದಲ್ಲಿದ್ದ 'ರೂಪದುರ್ಗ'ವೆಂಬ ಕೋಟೆಯಲ್ಲಿ ನೆಲಸತೊಡಗಿದ್ದನು. ಲಕ್ಷ್ಮಣಸೇನನು ಬಂದು ನೆಲಸಿದ ಕಾರಣದಿಂದಾಗಿಯೇ ರೂಪದುರ್ಗಕ್ಕೆ 'ಸೇನ ಪಹಾಡ್' ಎಂಬ ಹೆಸರು ಬಂದಿತ್ತು.

ಕಿಂದುಬಿಲ್ವ ಗ್ರಾಮವು 'ಗೀತಗೋವಿಂದ' ಎಂಬ ಶೃಂಗಾರ ಕಾವ್ಯ ಕರ್ತೃವಾದ ಜಯದೇವ ಕವಿಯ ಹುಟ್ಟೂರು.

ತಂದೆಯ ಕೃತಿಯಿಂದ ನೊಂದ ಯುವರಾಜನು ತನ್ನ ಅಶಾಂತವಾದ ಕ್ರುದ್ಧಮನದಲ್ಲಿ ಬಂದ ಮಾತುಗಳನ್ನೇ ತಂದೆಗೆ ತನ್ನೊಂದು ಪತ್ರದಲ್ಲಿ ಬರೆದಿದ್ದನು.

"ತಣ್ಣಗಿರುವುದು ನೀರಿನ ಸ್ವಭಾವ. ಸಹಜವಾಗಿಯೇ ನಿರ್ಮಲ ವಾದುದು. ಅಂತಹ ಜಲದ ಸ್ಪರ್ಶಮಾತ್ರದಿಂದ ಸಕಲವಸ್ತುಗಳೂ ನಿರ್ಮಲವಾಗುವುವು. ಸಕಲ ಜೀವಿಗಳಿಗೂ ಜೀವನ ಸ್ವರೂಪವಾದ ಮತ್ತು ನಿರ್ಮಲವಾದ ಇಂತಹ ಜಲವೇ ಕೊಳಕು ದಾರಿಯಲ್ಲಿ ಹರಿದರೆ?"

ನಿರ್ಮಲವಾದ ನೀರನ್ನು ನಿರ್ಮಲವಾಗಿದ್ದ ರಾಜನಿಗೆ ಹೋಲಿಸಿ ಬರೆದ ಪತ್ರವು ರಾಜನ ಮನಸ್ಸನ್ನು ಕೊರೆಯಿತು. ಅದಕ್ಕೆ ಅವನು ಬರೆದ ಉತ್ತರ:

"ಮದಗಜವಿನ್ನೂ ಸರೋವರಕ್ಕಿಳಿದು ಬಿಸಿಲ ತಾಪವನ್ನು ಪರಿಹರಿಸಲು, ಬಾಯಾರಿಕೆಯನ್ನಾರಿಸಲು, ಧೂಳುಕವಿದ ಮೈಯನ್ನು ಶುದ್ಧೀಕರಿಸಲು, ಸ್ವಚ್ಛಂದವಾಗಿ ಜಲಕೇಳಿಯಾಡಲಿಲ್ಲ; ಮೃಣಾಳವನ್ನು ಕಿತ್ತು

ತಿನ್ನಲೂ ಇಲ್ಲ. ಸೊಂಡಿಲಿನಿಂದ ಕಮಲನಾಳವನ್ನು ಸ್ಪರ್ಶಿಸುವಷ್ಟರೊಳಗೆ ತಾವರೆಗೆರಗಿದ್ದ ದುಂಬಿಗಳು, 'ಕಮಲವನವನ್ನು ಗಜರಾಜನು ಸೂರೆಗೈದನು' ಎಂದು ಏಕೆ ಉದ್ಘೋಷಿಸುವವೋ?"

—ಆನೆ ಬಂದು ಕಮಲವನವನ್ನು ಸೂರೆಗೈವ ಉಪಮೆಯಿಂದ ತನ್ನ ಸ್ಥಿತಿಯನ್ನು ವಿವರಿಸಿಕೊಂಡಿದ್ದನು ಬಲ್ಲಾಳಸೇನ. ತಾನಿನ್ನು ಕೆಟ್ಟುದೇನನ್ನೂ ಗೈದಿಲ್ಲ; ಅಷ್ಟರೊಳಗೇ, ಏಕೆ ಹೀಗೆ ಜನರು ತನ್ನೆದುರಾಗಿ ದನಿಯೆತ್ತುವರೋ?

"ಉತ್ತಮರ ಕುರಿತಾಗಿ ಇಂತಹ ಸ್ತ್ರೀ ವಿಷಯಕ ಭರ್ತ್ಸನೆಗಳು ಉದ್ಭವಿಸಿದಾಗ— ಅವು ನಿಜವಿರಲಿ; ಸುಳ್ಳಿರಲಿ—ಅದರಿಂದ ಅವರ ಕೀರ್ತಿ ಕುಂದುತ್ತದೆ. ತುಲಾ ರಾಶಿಯಲ್ಲಿ ತನ್ನ ನಿಖರ ಕಿರಣಗಳಿಂದ ಕೂಡಿ ಪ್ರಕಾಶಿಸಿದ ಸೂರ್ಯನು ಕನ್ಯಾ ರಾಶಿಯಲ್ಲಿ ತನ್ನ ತೇಜವನ್ನು ಕಳೆದುಕೊಳ್ಳುತ್ತಾನಲ್ಲವೇ?"

ಇದು ತಂದೆಯ ಪತ್ರಕ್ಕೆ ಮಾರೋಲೆಯಾಗಿ ಯುವರಾಜನ ಉತ್ತರ. ತುಲಾ ರಾಶಿಯಲ್ಲಿದ್ದು ಪ್ರಕಾಶಿಸಿದ ಸೂರ್ಯನು ಎಂದರೆ. ಜನರ ವಿಮರ್ಶೆಯ ತಕ್ಕಡಿಯಲ್ಲಿ ತೂಗಲ್ಪಟ್ಟು ಅವರ ಆದರಕ್ಕೆ ಪಾತ್ರನಾಗಿದ್ದ ಬಲ್ಲಾಳಸೇನನು, ಈಗ ಕನ್ಯಾ ರಾಶಿಯನ್ನು ಮುಟ್ಟಿದ ಸೂರ್ಯನಂತೆ— ಎಂದರೆ, ನೀಚ ಕನ್ಯೆಯ ಪರಿಗ್ರಹಣದಿಂದಾಗಿ— ತನ್ನ ತೇಜಸ್ಸನ್ನು ಕಸಿದುಕೊಂಡಿದ್ದಾನೆ—ಎಂದು ತುಂಬಾ ಮಾರ್ಮಿಕವಾಗಿ ತಂದೆಗೆ ಬರೆದಿದ್ದನು ಯುವರಾಜ!

ತನ್ನ ಮಗನ ಈ ತೀಕ್ಷ್ಣವಾದ ಮಾತುಗಳಿಗೆ ನೊಂದುಕೊಂಡೋ ಏನೋ, ತಂದೆ ಬಲ್ಲಾಳಸೇನನು ಈ ರೀತಿ ಉತ್ತರ ಕೊಟ್ಟಿದ್ದನು:

"ಚಂದ್ರನಲ್ಲಿ ಕಳಂಕದ ಬೀಜವನ್ನಿಟ್ಟ ದೋಷ ಸೃಷ್ಟಿಕರ್ತನಿಗೆ ಸೇರಿದುದು. ಕಳಂಕವನ್ನು ಹೊತ್ತಿದ್ದರೂ, ಪೂಜ್ಯನಾದ ಹಿಮಾಂಶುವು ಸುಧಾವೃಷ್ಟಿಯನ್ನು ಸುರಿಸಿ ಜಗತ್ತನ್ನು ತಣಿಸುವುದಿಲ್ಲವೇ? ಹಾಗಿರುವಾಗ ಅವನ ಅಲ್ಪ ಕಳಂಕವನ್ನು ಗುಣಗ್ರಾಹಿಗಳು ಗಣಿಸಬಹುದೇ?"

ಈ ಪತ್ರದಲ್ಲಿ ಚಂದ್ರನ ದೃಷ್ಟಾಂತವನ್ನು ಕೊಡುತ್ತಾ ಬಲ್ಲಾಳಸೇನನು ತನ್ನ ತಪ್ಪನ್ನು ದೇವರ ಮೇಲೆರಚಲು ಪ್ರಯತ್ನಿಸುತ್ತಿದ್ದನು. ಅಲ್ಲದೆ, ತಾನಿನ್ನು ಉತ್ತಮ ರೀತಿಯಲ್ಲಿ ಪ್ರಜಾರಂಜಕನಾಗಿದ್ದೇನೆಂದೂ ಎತ್ತಿ ತೋರಿ

ಸಿದ್ದನು. ಹೀಗಿದ್ದೂ ತಪ್ಪನ್ನೇ ಎತ್ತುವ ಲಕ್ಷ್ಮಣಸೇನನು ಗುಣಗ್ರಾಹಿಯಲ್ಲವೆಂದೂ ವ್ಯಂಗ್ಯವಾಗಿ ಸೂಚಿಸಿದ್ದನು.

ಈ ಪತ್ರವನ್ನು ಬಲ್ಲಾಳಸೇನ ತುಂಬಾ ನೊಂದುಬರೆದಂತಿತ್ತು. ಹೀಗಾಗಿ ಅದರ ವ್ಯಂಗ್ಯವು ಇನ್ನೂ ಯುವರಾಜನ ಮನಸ್ಸನ್ನು ಕುಟುಕುತ್ತಲೇ ಇತ್ತು.........

೩

ಅಜಯಾ ನದಿಯು ಅದೇ ರೀತಿಯಲ್ಲಿ ಜುಳುಜುಳನೆ ಹರಿಯುತ್ತಿದ್ದಿತು......

ಯುವರಾಜನೂ ಅದರ ಶಿಲಾವಾಟಿಕೆಯಲ್ಲಿ ಅದೇ ರೀತಿ ಚಿಂತಿತನಾಗಿ ಕುಳಿತಿದ್ದನು

ಬಲ್ಲಾಳಸೇನ ಮತ್ತು ತನ್ನೊಳಗೆ ನಡೆದ ಪತ್ರ ಮೂಲಕದ ಮಾತುಕತೆ ಅವನ ಕಣ್ಣೆದುರಿಗೆ ನಗ್ನವಾಗಿ ನರ್ತಿಸುತ್ತಾ ತನ್ನನ್ನು ಅಣಕಿಸುತ್ತಿದ್ದಂತೆ ತೋರುತ್ತಿತ್ತವನಿಗೆ

“ನೀನು ತಂದೆಯನ್ನು ನೋಯಿಸಿದವನು. ಇಲ್ಲದ ಅಪರಾಧವನ್ನು ಅವನ ಮೇಲೆ ಹೊರಿಸಿದವನು—ನೀನೇ ಅಪರಾಧಿ; ಪಿತೃದ್ರೋಹಿ......”

—ಎಂದು, ತಂದೆ ಬರೆದ ವಿವರ ಅವನನ್ನು ಅಣಕಿಸುತ್ತಿತ್ತು.

ಎದೆಯಾಳದಲ್ಲಿ ನಡೆದ ಈ ಕಳವಳದ ತುಮುಲ ಸಂಗ್ರಾಮದ ಪರಿಣಾಮವಾಗಿ ಯುವರಾಜನ ಕಣ್ಣಂಚಿನಲ್ಲಿ ಎರಡು ಅಶ್ರುಬಿಂದುಗಳು ಮೂಡಿಬಂದುವು. ಕಡಿದ ಹಾರದಿಂದ ಮುತ್ತಿನ ಮಣಿಗಳುರುಳುವಂತೆ, ಮೂಡಿ ಬಂದ ಬಿಂದುಗಳು ಸಂಜೆಯ ಎಳೆಬಿಸಿಲಿಗೆ ಮಿರುಗುತ್ತಾ ಅಜಯಾ ಪ್ರವಾಹದಲ್ಲಿ ತೇಲಿಹೋದುವು.........

“ರಾಜನಾದ ತಂದೆಯ ಅಪರಾಧ ಯಾವುದು? ಸುಂದರಿಯೊಬ್ಬಳನ್ನು ಪರಿಗ್ರಹಿಸಿದುದೇ? ರಾಜರು ಸ್ತ್ರೀಯನ್ನು—ನೀಚ ಕುಲದವಳಾದರೂ—ಪರಿಗ್ರಹಿಸಬಾರದೆಂದು ಯಾವ ಶಾಸ್ತ್ರ ನುಡಿದಿದೆ? ನೀನು ಅಜ್ಞಾನಿ. ಬಾಯಾರಿದವನು ತಿಳಿನೀರನ್ನು ಕುಡಿಯುವುದಲ್ಲದೆ ಕೆಸರನ್ನು ಕದಡುವುದೇಕೆ? ಗುಣಗ್ರಾಹಿಗಳು ಚಂದ್ರನ ಅಲ್ಪ ಕಲಂಕವನ್ನು ಗಣಿಸಬಹುದೇ?

ಇನ್ನೂ ಎರಡು-ನಾಲ್ಕು-ಮುತ್ತಿನ ಮಣಿಗಳು ಯುವರಾಜನ ಚಕ್ಷು ಗಳಿಂದ ಜಾರಿ ಅಜಯಾ ಪ್ರವಾಹವನ್ನು ಸೇರಿದುವು.

ತಂದೆಯ ಮೇಲಿನ ಅವನ ಕ್ರೋಧ ಆರಿತು.

ಅಷ್ಟರಲ್ಲಿ —

"ಕಿಂಕರಿಷ್ಯತಿ ಕಿಂವದಿಷ್ಯತಿ
ಸಾಚಿರಂ ವಿರಹೇಣ।"

ದೂರದಿಂದ ನದಿಯೆಡೆಯಿಂದ ಮಂದಮಾರುತವನ್ನು ಸೀಳಿಕೊಂಡು ಪ್ರವಾಹದ ಕಲಕಲದೊಡನೆ ಇಂಚರವು ಸಂಚರಿಸಿ ಬಂದಿತು. ಲಕ್ಷ್ಮಣ ಸೇನನು ಕತ್ತೆತ್ತಿ ನೋಡಿದನು:

ಅಜಯಾ ನದಿಯಲ್ಲಿ ದೋಣಿಯೊಂದು ತೇಲಾಡು ಬರುತ್ತಿತ್ತು. ಅದ ರೊಳಗಿನಿಂದಲೇ ಯಾರೋ ಹಾಡುತ್ತಿದ್ದರು:

ಪಶ್ಚಾತ್ತಾಪದಗ್ಧವಾದ ಯುವರಾಜನ ಹೃದಯದೊಳಕ್ಕೆ ಹಾಡು ನಾಟಿತು — ಕಿವಿಯು ಅತ್ತ ಒಲೆಯಿತು

ಹಾಡು ತರಂಗ ತರಂಗವಾಗಿ ಬರುತ್ತಿತ್ತು.

ಲಕ್ಷ್ಮಣಸೇನನು ಕೇಳುತ್ತಿದ್ದಂತೆಯೇ ಗಾನದ ಮಂದ್ರಸ್ವಾನವು ಉಡುಗಿ, ಬೇರೇನೋ ಭೈರವನಾದವು ಅಜಯಾನದಿಯ ತೆರೆತೆರೆಗಳಲ್ಲಿಯೂ ಪ್ರತಿಧ್ವನಿಸಿತು. ಯುವರಾಜನು ಆಗೊಮ್ಮೆ ಕತ್ತೆತ್ತಿ ನೋಡಿದನು.

ಅಜಯಾ ಅಲ್ಲೋಲ ಕಲ್ಲೋಲವಾಗಿದೆ. ಹೆಡೆಯೆತ್ತಿ ನೆಲಕ್ಕೆ ಅಪ್ಪಳಿಸುವ ಕ್ರುದ್ಧನಾಗನಂತೆ, ಬಂಡೆಗಲ್ಲುಗಳಂತಹ ನದಿಯ ತೆರೆಗಳು ಎದ್ದೆದ್ದು ಬೀಳುತ್ತಿವೆ......ನೋಡಿ ಯುವರಾಜನು ಅರಿತುಕೊಂಡನು.

ಅಜಯಾದಲ್ಲಿ ಬಿರುಗಾಳಿಯೆದ್ದಿದೆ; ಆ ಪ್ರೇಮಗಾನವಡಗಿ ಭೈರವ ಗಾನ ಕೇಳುತ್ತಿದೆ!

ನದಿಯ ವಕ್ಷದಲ್ಲಿದ್ದ ದೋಣಿಯನ್ನು ನಿರುಕಿಸಿದನು — ಅದು ತೆರೆಗಳ ಮೇಲೆ ಕೆಳಗೆ ನರಳಾಡುತ್ತಿದೆ! —

ಒಡನೆಯೇ ಅವನಿಗೆ ಗೋಚರಿಸಿತು —

ದೋಣಿಯು ಮೆಲ್ಲಮೆಲ್ಲನೆ ಮುಳುಗುತ್ತಿದೆ.

ಸಹಸಾ, ತನ್ನೆಲ್ಲಾ ವಿಚಾರಗಳನ್ನೂ ಬದಿಗೊತ್ತಿ, ರಾಜಭಕ್ತದ ಆ ಯುವರಾಜನು, ಆಪನ್ನ ವಿಪತ್ತಿನ ಆ ದೋಣಿಗೆ ಸಹಾಯ ನೀಡಲೆಂದು ನೀರಿಗೆ ಧುಮುಕಿದನು.

ದುಮುಕಿದೆಡೆಯಲ್ಲಿ ಫೇನಾವೃತ ವೀಚಿಗಳು ವೃತ್ತಾಕಾರವಾಗಿ ಉದ್ಭವಿಸಿ ದೂರದೂರ ಸರಿದುವು.

ಯುವರಾಜನು ನದಿಯನ್ನು ಈಜಿದನು.

೪

ಯುವರಾಜನು ದಡವನ್ನು ಸೇರಿದನು. ಬಾಹುಗಳಲ್ಲಿ ಸುಕುಮಾರ ಸುಂದರ ದೇಹವೊಂದನ್ನೆತ್ತಿಕೊಂಡಿದ್ದನು. ಇಸಿದಾದ ಆ ಗಾನದಷ್ಟೇ ಆ ರೂಪವೂ ಮಧುರವಾಗಿತ್ತು.

ನೀರಲ್ಲಿ ಮುಳುಗಿ ಪ್ರಜ್ಞಾಹೀನವಾದ ಸ್ತ್ರೀಯೊಬ್ಬಳನ್ನು ಲಕ್ಷ್ಮಣ ಸೇನನು ಎತ್ತಿ ತರುತ್ತಿದ್ದನು.

ಹೆಣ್ಣಿನ ಆ ಕೋಮಲ ಸ್ಪರ್ಶಮಾತ್ರದಿಂದಲೇ ಅವನ ದೇಹದಾದ್ಯಂತ ಏನೋ ಒಂದು ರಸವಾಹಿನಿ ಹರಿದಾಡಿದಂತಾಯಿತು. ತನ್ನ ಕೈಗಳಲ್ಲೊರಗಿದ ಆ ದೇಹವನ್ನು ನಿರುಕಿಸಿದನು.

ಅದೊಂದು ದಂತದಿಂದ ಕಡೆದ ಸುಂದರ ಮೂರ್ತಿ. ಅಷ್ಟು ಶುಭ್ರ! ಅಷ್ಟು ನುಣುಪು! ಉಟ್ಟಿದ್ದ ಚೀನಾಂಬರ, ನೀರಲ್ಲಿ ಮುಳುಗಿದ್ದುದರಿಂದ ಒದ್ದೆಯಾಗಿ ಮೈಗೆ ಅಂಟಿಕೊಂಡು ಅಂಗಾಂಗಗಳ ಸೌಂದರ್ಯವನ್ನು ಎತ್ತಿ ತೋರುತ್ತಿತ್ತು. ಕೆದರಿದ ದುಂಬಿವಿಂಡಿನಂತೆ ಚೆದರಿದ ಕೂದಲಿನ ಮಧ್ಯದಲ್ಲಿ ಆ ಮುಖ—ಕರಿಮೋಡದ ಮರೆಯಲ್ಲಿ ಹೊಳೆಯುವ ಚಂದ್ರಬಿಂಬದಂತೆ ತೋರುತ್ತಿತ್ತು. ನಿಮೀಲಿತವಾದ ಆ ನೀಲ ಕಣ್ಣುಗಳು, ಪ್ರಶಾಂತವಾದ ಕೊಳದಲ್ಲಿ ತಲೆಯೆತ್ತಿ ನಿಂತ ಕಮಲದ ಮುಕುಲಗಳಂತೆ ಕಾಣುತ್ತಿದ್ದುವು. ಆ ಕಂಬು ಕಂಠ—ಅಂತಹ ಗಾನವಾಹಿನಿಯನ್ನು ಹರಿಸಿದ ಆ ಕಂಠ! ಅದರ ಕೆಳಗೆ ವಿಶಾಲವಾದ ಎದೆಗಟ್ಟು; ಅದರ ಮೇಲೆ ಪೀವರ ಸ್ತನಯುಗ್ಮ! ಆ ಒಡನಡು, ನಿತಂಬ, ಊರುದ್ವಯ, ತಳಿರಡಿಗಳು,......ಎಲ್ಲವೂ ಯುವರಾಜನ ಕಣ್ಣಿಗೆ ಹೊಸತಾಗಿ, ಸುಂದರವಾಗಿ, ನವನವೋನ್ಮೇಷ ಶಾಲಿನಿಯಾಗಿ ತೋರಿದುವು.

ಅವನ ಹೃದಯ ತಂತ್ರಿಯು ಏನೋ ಒಂದು ಭಾವಗರ್ಭಿತವಾದ ರಾಗವನ್ನು ಮಿಡಿದಂತಾಯಿತು......

ಯುವರಾಜನು ಹಾಗೆಯೇ ಅದೇ ಸೋಪಾನ ಪಂಕ್ತಿಯನ್ನುತ್ತರಿಸಿ, ಮಲ್ಲಿಗೆ ಬನವನ್ನು ನುಸಿದು, ರಾಧಾ– ಮಾಧವ ಮಂದಿರಕ್ಕೆ ಆಕೆಯನ್ನು ಎತ್ತಿತಂದನು. ಎದುರಿಗೆ ರಾಧಾ– ಮಾಧವರ ಲಾಸ್ಯಭಂಗಿಯ ಬಿಂಬಗಳು. ಅವರ ಮುಖಗಳಲ್ಲಿ ಪ್ರೇಮಜ್ಯೋತಿ ಮಿನುಗುತ್ತಿದೆ......

ಆ ಮೂರ್ತಿ ಎದುರಿಗೆ ಅವಳನ್ನು ಇಳುಹಿದನು ಯುವರಾಜ. ಹಾಗೆಯೇ, ಕಿಂಕರ್ತವ್ಯತಾ ಮೂಢನಾಗಿ ಅವಳನ್ನೇ ದಿಟ್ಟಿಸಿ ನಿಂತನು.

ಹೀಗೆಯೇ ಎಷ್ಟೋ ಹೊತ್ತು: ಕ್ಷಣ– ನಿಮಿಷ– ಗಳಿಗೆ—

ಮೆಲ್ಲನೆ ಗುಡಿಯೊಳಗೆ ಮಂದಮಾರುತವು ಸುಳಿಯಿತು. ಅದರೊಡನೆ ಮಲ್ಲಿಕಾ ಕುಸುಮದ ನರುಗಂಪೂ ವ್ಯಾಪಿಸಿತು.

ನಿಶ್ಚಲವಾಗಿದ್ದ ಅವಳ ಸ್ತನಯುಗ್ಮ ಮೆಲ್ಲ ಮೆಲ್ಲನೆ ಏರಿಳಿಯಿತು..... ಆಕೆ ಉಸಿರಾಡತೊಡಗಿದಳು.

ಹಾಗೆಯೇ ಯುವರಾಜನ ಎದೆಯಲ್ಲಿ ಭಾವನೆಗಳೂ ಏರಿಳಿಯ ತೊಡಗಿದುವು.

ಮೆಲ್ಲಮೆಲ್ಲನೆ ಅವಳ ನರತಂತ್ರಿಗಳಲ್ಲಿ ಚೈತನ್ಯ ಸುಳಿದಾಡಿತು; ರಕ್ತ ನಾಳಗಳಲ್ಲಿ ಬಿಸಿ ರಕ್ತ ಸಂಚರಿಸಿತು.

ಆ ತಾವರೆ ಮುಗುಳುಗಳು ಹಾಗೆಯೇ ನಿಧಾನವಾಗಿ ತೆರೆದು ಕೊಂಡುವು. ಒಡನೆಯೇ ಅದಕ್ಕೆ ದುಂಬಿ ಒಂದೆರಗಿತು—

ಆಕೆಯ ಆ ಕಪ್ಪು ಕಣ್ಣು ಬೊಂಬೆಗಳು ಮಿಂಚಿನಂತೆ ಯುವರಾಜನ ಮೇಲೆರಗಿದುವು. ಅಪರಿಚಿತತೆಯ ಭಾವನೆ ಅಲ್ಲಿ ಸುಳಿದಾಡಿತು.

ಆಕೆ ಪ್ರಾಪ್ತ ಪ್ರಜ್ಞಳಾದುದನ್ನು ತಿಳಿದು, ರಾಜಕುಮಾರನು ಕುತೂಹಲಿತನಾಗಿ ಕೇಳಿದನು:

"ಸುಂದರಿ ನೀನು ಯಾರು?"

ಕ್ಷಣಕಾಲ ಆಕೆ ಉತ್ತರಿಸಲಿಲ್ಲ. ಆಕೆಯ ಕಟಾಕ್ಷ ಅವನ ಮುಖದ ಮೇಲೆ ಎರಗಿಯೆ ಇತ್ತು....ಮೆಲ್ಲ ಮೆಲ್ಲನೆ, ಅವಳ ತುಟಿಗಳು ಅಲುಗಾಡಿದುವು:

"ನಾನೊಬ್ಬಳು ನರ್ತಕಿ"

ಇನ್ನೊಮ್ಮೆ ಮೌನ. ರಾಜಕುಮಾರನು ಓಟ್ಟಿಸಿದನು. ರಾಧಾ—ಮಾಧವರು ತಮ್ಮನ್ನು ನೋಡಿ ಏಕೋ ಸಾಂಕೇತಿಕವಾಗಿ ನಗುತ್ತಿದ್ದಾರೆಂದು ತೋರಿತವನಿಗೆ.

ಇನ್ನೊಮ್ಮೆ ಆಕೆಯೇ ಕೇಳಿದಳು:

"ನಾನೆಲ್ಲಿದ್ದೇನೆ ಈಗ? ನೀವು ಯಾರು?"

"ಅಜಯಾದ ಅತಲ ಜಲರಾಶಿಯಲ್ಲಿ ನೀನು ಮುಳುಗಿದ್ದೆ. ಅಲ್ಲಿಂದೆತ್ತಿ ನಿನ್ನನ್ನಿಲ್ಲಿಗೆ ಕರೆತಂದೆ. ಇದು ಕಿಂದುಬಿಲ್ವಗ್ರಾಮದ ರಾಧಾಮಾಧವ ಮಂದಿರ."

ಈ ಮಾತನ್ನು ಕೇಳಿದೊಡನೆಯೇ ಅವಳ ಪೂರ್ವ ಚೈತನ್ಯ ಆಕೆಯಲ್ಲಿ ಸುಳಿದಂತಾಯಿತು. ಪ್ರೇಮ-ಭಕ್ತಿ ಅವಳ ಆ ಸುಂದರ ಮುಖದಲ್ಲಿ ತುಳುಕಾಡಿತು.

"ಆಹಾ! ರಾಧಾಮಾಧವ! ನನ್ನ ಗುರುವಿನ ಮಾನಸ ಮೂರ್ತಿ."

ಎನ್ನುತ್ತಾ ಮೂರ್ತಿಯೆದುರಿಗೆ ಪೊಡಮಟ್ಟಳಾಕೆ.

ಏಕೋ, ಅದನ್ನು ನೋಡುತ್ತಾ ಯುವರಾಜನ ಕೈಗಳೂ ಭಕ್ತಿಯಿಂದ ಜೋಡಿದುವು. ಪ್ರೇಮ ಭಾರಕ್ಕೆ ಕಣ್ಣು ಅರ್ಧನಿಮೀಲಿತವಾಯಿತು...... ದೂರದಲ್ಲಿ ಪ್ರೇಮಗಾನ ಕೇಳಿಸಿದಂತಾಯಿತು. ಇಬ್ಬರ ಕಿವಿಗಳೂ ಅತ್ತ ಆಲೈಸಿದುವು—

"ಆಹಾ! ನನ್ನ ಗುರುದೇವ ಬರುತ್ತಿದ್ದಾರೆ!"

ಉದ್ಗಾರ ಅವಳ ಬಾಯಿಯಿಂದ ಹೊರಟಿತು.

"ಯಾರು— ಜಯದೇವ!"

"ಹಾ— ಅವರೇ, ನನ್ನ ಗುರುದೇವ!"

ಪ್ರೇಮಗೀತೆಯ ಆಲಾಪನೆ ಹತ್ತಿರ ಹತ್ತಿರವಾಯಿತು.

ಅದರೊಡನೆಯೇ, ಗೌರ ವರ್ಣದ, ಸುಂದರ ಕಾಯದ, ತುಲಸಿ ಮಾಲಾ ರಂಜಿತ. ಪೀತಾಂಬರ ಧಾರಿಯಾದ, ಶ್ರೀಚಂದನ ಚರ್ಚಿತ ಕಾಯನಾದ ಪ್ರಸನ್ನ ವದನದ ವಿಪ್ರನೊಬ್ಬನು ಮಂದಿರವನ್ನು ಪ್ರವೇಶಿಸಿದನು.

ಯುವರಾಜನು ನೋಡಿದನು— ಅವನೇ ಜಯದೇವಕವಿ!

"ಆಹಾ—ಗುರುದೇವ!"

ಎನ್ನುತ್ತ, ಆ ಸುಂದರಿ ನರ್ತಕಿ ಜಯದೇವನಿಗೆ ಪೊಡಮಟ್ಟಳು.

"ಓಹ್! ಪದ್ಮಿನಿ!"

ಎಂದು ಮುದಿತಾಂತರಂಗನಾಗಿ ಉದ್ಗರಿಸಿದನು ಜಯದೇವ.

"ಪದ್ಮಿನಿ."

—ಈ ಮಾತು ಯುವರಾಜನ ಕರ್ಣರಂಧ್ರವನ್ನು ಪ್ರವೇಶಿಸಿ, ಹೃದಯದಲ್ಲಿ ಅಲ್ಲೋಲಕಲ್ಲೋಲವನ್ನುಂಟುಮಾಡಿತು. ಅವನ ತುಟಿಗಳಲ್ಲರಳಿದ ಸುಖದ ನಗೆಯುರಳು ಬಾಡಿ ಕಳಗುರುಳಿತು. ಚಂದ್ರಬಿಂಬವೂ ಬಾಡಿತು. ಅವನ ಅಂತರಂಗವು ಮಿಡುಕಿತು— ಹತ್ತು ಬಾರಿ.. ..... ಸಹಸ್ರ ಬಾರಿ. ...

"ಈಕೆ ಪದ್ಮಿನಿ! ಅವಳೇ!..... ತಂದೆಯ ಪ್ರೇಯಸಿಯಾದ ಅವಳೇ ಇವಳಿರಬಹುದೇ?......"

"ಪದ್ಮಿನಿ, ಏಕೆ ಬಂದಿರುವೆ? ನಿನ್ನ ರಾಧಾ–ಮಾಧವರ ಸೇವಾಯಿತೇನು?"

ಎಂದು ಕೇಳಿದನು ಜಯದೇವ.

"ಗುರುಗಳ ಆಶ್ರಯಕ್ಕೆ ಮರಳಿಯೊಮ್ಮೆ ಬಂದಿದ್ದೇನೆ."

"ರಾಜಧಾನಿಯ ವೈಭವ—ವಿಲಾಸಗಳನ್ನು ಬಿಟ್ಟು?"

"ಎಲ್ಲಿಯ ವೈಭವ— ವಿಲಾಸ ಗುರುದೇವ? ಇನ್ನೆಲ್ಲಿ ಅದು?"

ಅವಳ ಮುಖಕಮಲ, ಹಿಮವರ್ಷಣಕ್ಕೆ ಸಿಲುಕಿ, ಸೊರಗಿ ಬಾಡಿತು.

"ಅಂದರೆ? ರಾಜನಾದ ಬಲ್ಲಾಳಸೇನ- ಅವನು ನಿನ್ನನ್ನು ತ್ಯಜಿಸಿದನೇ?"

"ನನ್ನ ದುರ್ದೈವ."

ಯುವ ರಾಜನ ತಲೆಯೊಳಗೆ ನೂರಾರು ಮಿಂಚುಗಳು ಸುಳಿದಾಡಿದುವು; ನೂರಾರು ಸಿಡಿಲುಗಳು ಎರಗಿದುವು; ನೂರಾರು ಗುಡುಗುಗಳು ಮೊಳಗಿದುವು—ಅವನ ಹೃದಯದಲ್ಲಿ ಝುಂಝಾ ವಾತವೆದ್ದಿತು....

ಜಯದೇವ ಬೆರಗಾಗಿ, ನೀರವವಾಗಿ ನಿಂತಿದ್ದನು. ಪದ್ಮಿನಿಯೇ ಹೇಳಿದಳು:

"ಮಹಾರಾಜನ ಪುತ್ರನಂತೆ-ಯುವ ರಾಜನಂತೆ-ಅವನ ಹಠಕ್ಕೆ ತಲೆ ವಾಗಿ ಮಹಾರಾಜನು ನನ್ನನ್ನು ತ್ಯಜಿಸಿ ಬಿಟ್ಟನು. ಹಾಗೆಯೇ, ಈಗ ಮರಳಿ ಯೊಮ್ಮೆ ಗುರುಪಾದವನ್ನು ಸೇರುತ್ತಿದ್ದೇನೆ— ಕಡಲಿನಿಂದಲೇ ಹೋದ ಮಳೆ ವನಿಯು, ಈಗ ಮರಳಿಯೊಮ್ಮೆ ಕಡಲನ್ನು ಸೇರುತ್ತದೆ."

ಕೇಳುತ್ತಾ ಕೇಳುತ್ತಾ ಜಯದೇವನ ಮುಖವೂ ಕಂದಿತು. ಅವನು ಪದ್ಮಿನಿಯನೊಮ್ಮೆ, ರಾಧಾಮಾಧವರನ್ನೊಮ್ಮೆ, ದಿಟ್ಟಿಸಿ ನೋಡಿದನು.

ಯುವರಾಜನಿಗೆ ಈಗ ಎಲ್ಲವೂ ಅವಗತವಾಯಿತು. ತನಗಾಗಿ, ತನ್ನ ತಂದೆಯು ತಾನೊಲಿದ ಪ್ರೇಯಸಿಯನ್ನು ತ್ಯಜಿಸಿದ್ದನು. ಆಕೆಯೇ ಈಕೆ— ಆ ಪದ್ಮಿನಿ. ಆಕೆಯನ್ನು ಸ್ಪರ್ಶಿಸಿಯಲ್ಲವೇ ತನ್ನ ಮೈ ಪುಳಕಿತವಾದುದು? ಆಕೆಯನ್ನು ಸ್ಪರ್ಶಿಸಿಯಲ್ಲವೇ ತನ್ನ ಹೃದಯ ತಂತ್ರಿಯು ಸುಕುಮಾರ ರಾಗವನ್ನು ಮಿಡಿದುದು? ಎಂತಹ ಚೈತನ್ಯಶಾಲಿನಿಯಾದ ಸ್ತ್ರೀ—ಪದ್ಮಿನಿ; ತನ, ತಂದೆಯ ಪ್ರೇಯಸಿ!

ಅವಳನ್ನು ತಂದೆ ಪರಿಗ್ರಹಿಸಿದುದನ್ನು ಕೇಳಿಯಲ್ಲವೇ ತನ್ನ ತಂದೆಯ ವಿರುದ್ಧ ತಾನು ವಾದಯುದ್ಧವನ್ನೇ ಹೂಡಿದುದು? ಎಂತಹ ಅವಿವೇಕಿ ತಾನು-ತಿಳಿಗೇಡಿ...ಪಿತೃ ದ್ರೋಹಿ.....

"ಮಹಾರಾಜನ ಪುತ್ರನಂತೆ-ಯುವರಾಜನಂತೆ-ಅವನ ಹಠಕ್ಕೆ ತಲೆಬಾಗಿ ಮಹಾರಾಜನು ನನ್ನನ್ನು ತ್ಯಜಿಸಿ ಬಿಟ್ಟನು....."

ಪದ್ಮಿನಿಯ ನಿರಾಶೆಯ ಆ ನುಡಿಗಳು ಅವನೆದೆಯನ್ನೇ ಸೀಳಿ, ಅವನ ಅಂತಃಕರಣವನ್ನು ಹೊರಗೆಳೆದುವು.

ಅವನ ಕಣ್ಣುಗಳು ರಾಧಾಮಾಧವರ ಬಿಂಬಗಳನ್ನೇ ನಿಟ್ಟಿಸಿದುವು. ಹಾಗೆಯೇ, ಹೊಸತೊಂದು ಬೆಳಕು ಅವನ ಮನದಲ್ಲಿ ಮೂಡಿತು.

ಅವನು ನುಡಿದನು:

"ಇಲ್ಲ—ಇನ್ನು ಆ ಯುವರಾಜನು ಹಠಮಾಡಲಾರನು. ಮಹಾ ರಾಜನು ಇನ್ನೊಮ್ಮೆ ನಿನ್ನನ್ನು ಪರಿಗ್ರಹಿಸುವನು."

ಇದು ತನಕ ಗುರು—ಶಿಷ್ಯೆಯರು ತಮ್ಮ ಮಿಲನದ ಸಂಭ್ರಮದಲ್ಲಿ, ತಮ್ಮ ಬಳಿಯಲ್ಲಿ ಇನ್ನೊಬ್ಬ ವ್ಯಕ್ತಿಯಿರುವನೆಂಬುದನ್ನೇ ಮರೆತಿದ್ದರು. ಈಗ ಪಕ್ಕನೆ ನೋಡಿದರು;

ಅಲ್ಲಿ ನಿಂತ ಆ ಸುಂದರ ತರುಣ ದೃಢವಾಗಿ ನುಡಿಯುತ್ತಿದ್ದ:

"ಇಲ್ಲ— ಇನ್ನು ಆ ಯುವರಾಜನು ಹತನಾಗಲಾರನು; ಮ
ರಾಜನು ಇನ್ನೊಮ್ಮೆ ನಿನ್ನನು ಪರಿಗ್ರಹಿಸುವನು."

ನೋಡುತ್ತಾ ನಿಂತು ಬೆರಗಾದ ಜಯದೇವ— ಪದ್ಮಿನಿಯರಿ
ಮುಖದಲ್ಲಿಯೂ ಅಪರಿಚಿತತೆಯ ಛಾಯೆ ದಟ್ಟವಾಗಿ ಮುಸುಕಿತ್ತು. ಅ
ನೋಡುತ್ತಾ, ಹೋದಂತೆ, ಏನೋ ತಿಳಿದಂತಾಗಿ, ಜಯದೇವನ ಮ
ಬೆಳಗಿತು.

ಪದ್ಮಿನಿಗೂ, ಆ ಸತ್ಯವು ಮೆಲ್ಲ ಮೆಲ್ಲನೆ— ಮೂಡಣದೆಯಲ್ಲಿ ಚ
ಕಿರಣ ಪ್ರಸರಿತವಾಗುವಷ್ಟು ಮೆಲ್ಲನೆ— ತಿಳಿಯಿತು.

ಎಲ್ಲರೂ ನೋಡಿದರು:

ಎದುರಿಗೆ, ರಾಧಾಮಾಧವರು ಲೋಕವನ್ನೇ ಮೋಡಿಗೊಳಿ
ನಗುವನ್ನು ನಗುತ್ತಿದ್ದರು!



